


# ಗುಣಾತ್ಮಕ ಸ್ಪರ್ಶ

## ತಿರುಮಲೆ - ತಿರುಪತಿ ದೇವಸ್ಥಾನಗಳವರು ಆರಂಭಿಸಿರುವ

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನೀ ಯೋಜನೆ

ಪ್ರಾಚೀನ ಕಾಲದಿಂದಲೂ ತಿರುಮಲೆಯು ಒಂದು ಮಹತ್ವದ ಯಾತ್ರಾಕ್ಷೇತ್ರವಾಗಿದ್ದು ಪ್ರತಿದಿನವೂ ಸಾವಿರಾರು ಮಂದಿ ಯಾತ್ರಿಕ ಭಕ್ತರು ಆಗಮಿಸಿ ಶ್ರೀ ವೆಂಕಟೇಶ್ವರಸ್ವಾಮಿಯಲ್ಲಿ ತಮ್ಮ ಐಹಿಕ ಆಧ್ಯಾತ್ಮಿಕ ಕ್ಷೇಮ ಲಾಭಗಳಿಗಾಗಿ ಪ್ರಾರ್ಥನೆ ಸಲ್ಲಿಸುತ್ತಿದ್ದಾರೆ

ಯಾತ್ರಿಕ ಸೇವೆಯಲ್ಲಿ ಸಮರ್ಪಿತವಾಗಿರುವ ತಿ ತಿ ದೇವಸ್ಥಾನಗಳ ಮಾನವಸೇವೆಯ ಒಂದು ಭಾಗವೇ ರೋಗ ಚಿಕಿತ್ಸೆ, ತಿ ತಿ ದೇವಸ್ಥಾನಗಳು ಈಗಾಗಲೇ ಒಂದು ಕುಷ್ಠರೋಗ ನಿವಾರಣಾಕೇಂದ್ರ, ವಿಕಲಾಂಗ ಚಿಕಿತ್ಸಾ ಆಸ್ಪತ್ರೆ, ಅನಾಥಾಲಯ, ಕೇಂದ್ರ ಆಸ್ಪತ್ರೆಗಳನ್ನು ನಿರ್ವಹಿಸುತ್ತಿವೆ ಅಗತ್ಯವಿರುವ ಬಡ ರೋಗಿಗಳ ಸೇವೆಗೆಂದು ದೆಹಲಿ, ಪಾಂಡಿಚೇರಿ, ಚಂಡಿಗಢಗಳಲ್ಲಿರುವಂತೆ, ಅತ್ಯಾಧುನಿಕ ಯಂತ್ರೋಪಕರಣಗಳಿಂದ ಕೂಡಿದ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ - ಶ್ರೀ ವೆಂಕಟೇಶ್ವರ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ (ಸ್ವಿಮ್ಸ್) ಅನ್ನು ಸ್ವಾಮಿಯ ಆಶೀರ್ವಾದದೊಡನೆ ಆರಂಭಿಸಲಾಗಿದೆ ಇಲ್ಲಿ ವೈದ್ಯಕೀಯ ವಿಜ್ಞಾನದ ಸೇವೆ, ತರಬೇತಿ, ಶಿಕ್ಷಣಗಳನ್ನು ನೀಡುವುದೇ ಅಲ್ಲದೆ, ಸಂಶೋಧನೆ, ಅಭಿವೃದ್ಧಿಗಳನ್ನೂ ಸಾಧಿಸಲು ಅವಕಾಶ ಮಾಡಲಾಗಿದೆ

ಇಂತಹ ಅತ್ಯಾಧುನಿಕ ಯಂತ್ರೋಪಕರಣಗಳ ಆಸ್ಪತ್ರೆಯ ಅನುಕೂಲಗಳು ನಮ್ಮ ಎಲ್ಲ ಸಹೋದರರಿಗೂ ಸಿಗುವಂತಾಗಬೇಕು

ಈ ಹೀನ ಉದ್ದೇಶದಿಂದ ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನೀ ಯೋಜನೆಯನ್ನು ಆರಂಭಿಸಲಾಗಿದೆ ಇದರಿಂದಾಗಿ ಅಗತ್ಯವಿರುವ ಎಲ್ಲರಿಗೂ ಅನುಕೂಲಕರವಾದ ದರಗಳಲ್ಲಿ ಅತ್ಯಾಧುನಿಕ ಸೌಕರ್ಯಗಳ ಚಿಕಿತ್ಸಾ ಸೌಲಭ್ಯ ದೊರೆಯುವಂತ ಆಗುವುದು ಈ ಯೋಜನೆಯ ವಿವರಗಳನ್ನು ಕೆಳಗೆ ನೀಡಲಾಗಿದೆ ದಾನಿಗಳು ಉದಾರ ಹೃದಯದಿಂದ ದಾನ ನೀಡಬೇಕೆಂದು ಆಹ್ವಾನಿಸುತ್ತೇವೆ

**ಯೋಜನೆಯ ವಿವರ**

* ಸ್ವಿಮ್ಸ್‌ಗೆ ನೀಡುವ ಎಲ್ಲ ದಾನಗಳೂ 80 (ಜಿ) ಕಲಮಿನಂತೆ 100 ಶತಾಂಶ ಆದಾಯಕರ ವಿಮುಕ್ತವಾಗಿರುವುದು
* ದಾನಗಳನ್ನು ಯಾರುಬೇಕಾದರೂ - ವ್ಯಕ್ತಿ, ಕುಟುಂಬ, ಸಂಘ, ಸಂಸ್ಥೆಗಳು - ಮಾಡಬಹುದು
* ಒಂದು ಲಕ್ಷ ರೂಪಾಯಿ ಹಾಗೂ ಹೆಚ್ಚಿನ ಹಣ ನೀಡಿದವರ ಹೆಸರುಗಳನ್ನು ಆಸ್ಪತ್ರೆಯ ಸ್ವಾಗತ ಕಚೇರಿಯಲ್ಲಿ ಪ್ರಕಟಿಸಲಾಗುವುದು
* ಐದು ಲಕ್ಷ ಮತ್ತು ಹೆಚ್ಚಿನ ಹಣ ದಾನ ಮಾಡಿದವರ ಹೆಸರುಗಳನ್ನು ಕೋಣೆಗಳಿಗಿಡಲಾಗುವುದು
* ಒಂದು ಉಪವಿಭಾಗಕ್ಕೆ 15 ಲಕ್ಷ ರೂಪಾಯಿಗಳಿಗಿಂತ ಹೆಚ್ಚು ದಾನ ನೀಡಿದವರ ಹೆಸರನ್ನಿಡಬಹುದು
* 15 ಲಕ್ಷ ರೂ ಗಳಿಗೂ ಹೆಚ್ಚಿನ ದಾನ ನೀಡುವವರ ಹೆಸರಿನಲ್ಲಿ ಒಂದು ಘಟಕವನ್ನೂ ಹೆಸರಿಸಬಹುದು
* ಒಂದು ಸ್ನಾತಕೋತ್ತರ ಶಿಕ್ಷಣ ವಿದ್ಯಾರ್ಥಿನಿಲಯ, ಶಸ್ತ್ರಚಿಕಿತ್ಸಾ ಕೋಣೆ, ನರ್ಸ್‌ಗಳ ವಸತಿ ಗೃಹ, ರೋಗಿಗಳ ನೆರವಿಗರ ಸತ್ರಗಳಲ್ಲಿ ಒಂದಕ್ಕೆ - ಒಂದು ಕೋಟಿ ರೂಪಾಯಿ ನೀಡುವವರ ಹೆಸರನ್ನಿಡಬಹುದು
* ಐದು ಲಕ್ಷ ರೂಪಾಯಿಗಳ ದಾನದ ಮೂಲಕ ವರ್ಷದಲ್ಲಿ ಒಂದು ಪ್ರಮುಖ ಶಸ್ತ್ರ ಚಿಕಿತ್ಸೆಯನ್ನು ಆಗಮಾಡಿಸಬಹುದು
* ಪೂರ್ಣವಾಗಿ ಸಂಶೋಧನೆಯ ಉದ್ದೇಶದ ಪೀಠಗಳನ್ನು ಹತ್ತು ಲಕ್ಷ ರೂಪಾಯಿ ದಾನಗಳಿಂದ ಸ್ಥಾಪಿಸಬಹುದು

**ಐದು ಲಕ್ಷ - ಮತ್ತು ಹೆಚ್ಚಿನ ದಾನ ನೀಡುವವರಿಗೆ ತಿರುಮಲೆಯಲ್ಲಿ ಕಲ್ಪಿಸುವ ಸೌಲಭ್ಯಗಳು**

* ಸ್ವಾಮಿಯ ಓಲಗದಲ್ಲಿ ಆವರ್ತನ ಪದ್ಧತಿಯಲ್ಲಿ ದಾನಿಯ ಹೆಸರನ್ನು ಹೇಳಲಾಗುವುದು
* ವರ್ಷದಲ್ಲಿ ಮೂರುದಿನಗಳು ದಾನಿಯ ಕುಟುಂಬದ ಐವರಿಗೆ ಬಿಡುವಿನ ಸಮಯದಲ್ಲಿ ಆರತಿ ಸಮೇತ ಸ್ವಾಮಿ ದರ್ಶನದ ಏರ್ಪಾಡು
* ವರ್ಷದಲ್ಲಿ ಮೂರು ದಿನಗಳ ಕಾಲ ದಾನಿಯ ಕುಟುಂಬದ ಐವರಿಗೆ ಅತಿಗಣ್ಯ ವ್ಯಕ್ತಿಗಳ ವಸತಿಯನ್ನು ಉಚಿತವಾಗಿ ನೀಡಲಾಗುವುದು
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಬಂಗಾರದ ಚಿತ್ರದ ಫ್ಲಾಪಿಕೆಯನ್ನು ದಾನಿಗೆ ನೀಡಲಾಗುವುದು
* ದಾನಿಗಳು ಆಸ್ಪತ್ರೆಗೆ ಬೇಕಾದ ಉಪಕರಣಗಳು, ವಾಹನಗಳು, ದಾನ ನೀಡಬಹುದು ಅಪೇಕ್ಷೆಪಟ್ಟಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿನ ಆರೋಗ್ಯ ತಪಾಸಣಾ ಶಿಬಿರಗಳನ್ನು ನಡೆಸಲು ಮುಂದೆ ಬರಬಹುದು

ಮಿಕ್ಕ ವಿಷಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ-

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

ಅಥವಾ

**ನಿರ್ದೇಶಕರು,**
ಶ್ರೀ ವೆಂಕಟೇಶ್ವರ ಇನ್ಸಿಟಿಟ್ಯೂಟ್ ಆಫ್
ಮೆಡಿಕಲ್ ಸೈನ್ಸಸ್, ತಿರುಪತಿ



ಶ್ರೀ ವೆಂಕಟೇಶಾ ಸಲಹು ವೆಂಕಟೇಶಾ
ಭಾವಿತ ಸೇವಕ ಭವಭಯ ನಾಶಾ

ಸುರಾರಿ ಗಜಗಳೆಂಬ ಗಣಕೆ ಕಂಠೀರವ
ಕರಿರಾಜ ಸಂಕಟ ಕಿತ್ತ ದೇವ
ಪರಮ ಭಾಗವತರ ಸಮೂಹ ಸಂಜೀವನ
ಪುರಹರವರ ಮತ್ತ ವೃಕಾಸುರ ಮಥನ

ವನಜ ಸಂಭವ ಸಮೀರರೊಡೆಯ ಶ್ರೀರಮಣ
ಮುನಿ ಹೃದಯಾಲಯ ಪರಿಪೂರಣ
ಫಣಿ ವರಶಾಯಿ ಪರಾತ್ಪರ ಅಗಣಿತ
ಗುಣ ಗಂಭೀರ ಸಜ್ಜಗದ ದಾತ

ಶುಕ ಶೌನಕ ಸನಕಾದಿ ದೇವ ಋಷಿ
ಸಕಲ ಸುರ ಭೂಸುರ ರಾಜಾಧೀಶ
ಭಕುತವತ್ಸಲ ಬಾದರಾಯಣ ಹರಿಹಯ
ಮುಖ ಪ್ರಸನ್ನವೆಂಕಟ ಗಿರಿ ನಿಲಯ

- ಶ್ರೀ ಪ್ರಸನ್ನ ವೆಂಕಟದಾಸರು.

ಸಂದರ್ಶಿಸಿ ಆರಾಧಿಸಿ ಆನಂದಿಸಿ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ

## ತಿರುಪತಿ





# ವಾರ್ಷಿಕ ಬ್ರಹ್ಮೋತ್ಸವಗಳು

### 21-5-99 ರಿಂದ 30-5-99 ವರೆಗೆ

ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 21-5-99 | ಶುಕ್ರವಾರ | -- | ಅಂಕುರಾರ್ಪಣೆ |
| 22-5-99 | ಶನಿವಾರ | ಧ್ವಜಾರೋಹಣ | ದೊಡ್ಡಶೇಷವಾಹನ |
| 23-5-99 | ಭಾನುವಾರ | ಚಿಕ್ಕಶೇಷವಾಹನ | ಹಂಸವಾಹನ |
| 24-5-99 | ಸೋಮವಾರ | ಸಿಂಹವಾಹನ | ಮುತ್ತಿನಚಪ್ಪರವಾಹನ |
| 25-5-99 | ಮಂಗಳವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 26-5-99 | ಬುಧವಾರ | ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರ | ಗರುಡವಾಹನ |
| 27-5-99 | ಗುರುವಾರ | ಹನುಮದ್ವಾಹನ<br>ಸಂಜೆ ವಸಂತೋತ್ಸವ | ಗಜವಾಹನ |
| 28-5-99 | ಶುಕ್ರವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 29-5-99 | ಶನಿವಾರ | ರಥೋತ್ಸವ | ಅಶ್ವವಾಹನ |
| 30-5-99 | ಭಾನುವಾರ | ತೀರ್ಥವಾರಿ ಅವಭೃಥ | ತಿರುಚ್ಚಿ ಉತ್ಸವ |

ಸೂಚನೆ ಶ್ರೀ ಗೋವಿಂದರಾಜಸ್ವಾಮಿ ಆಲಯ ತಿರುಪತಿಯ ರೈಲ್ವೇ ನಿಲ್ದಾಣದ ಬಳಿಯಿದೆ ಬಸ್ ನಿಲ್ದಾಣಕ್ಕೂ ಬಹಳ ಹತ್ತಿರ. ಇಲ್ಲಿ ಬ್ರಹ್ಮೋತ್ಸವದ ದಿನಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳೂ ಉಂಟು

ತಾವೂ ಬನ್ನಿ ತಿ.ತಿ.ದೇ. ತಮ್ಮವರನ್ನೂ ಕರೆತನ್ನಿ




ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ

ಸಂಪುಟ 29 ಮೇ 1999 ಸಂಚಿಕೆ - 12



ಮುಖಚಿತ್ರ - ಶ್ರೀ ಮದಾಂಜನೇಯಸ್ವಾಮಿ - ಚಿತ್ರ-ಡಾ॥ ಕೆ ಜಗದೀಶ್
ಹಿಂಬದಿಯಲ್ಲಿ ಶ್ರೀಮದನ್ನಮಾಚಾರ್ಯ - ಚಿತ್ರ - ನಾರಾಯಣಗಿರಿ ದತ್ತು.



ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**




ಬೆಟ್ಟದೊಡೆಯನು ಭೂಮಿಯನ್ನು ಪ್ರಳಯಕಾಲದಲ್ಲಿ ಉಂಡು, ಸೃಷ್ಟಿಕಾಲದಲ್ಲಿ ಉಗಿದು, ವಾಮನಾವತಾರದಲ್ಲಿ ಅಳೆದು ವರಾಹಾವತಾರದಲ್ಲಿ ಕಟ್ಟಿ ಮೇಲೆತ್ತಿ, ರಾಮಾವ ತಾರದಲ್ಲಿ ನಡೆದಾಡಿ, ಸರ್ವರನ್ನೂ ಅನುಗ್ರಹಿಸಿದರೆ, ಆಳ್ವಾರ್ ತಿರುನಗರಿಯ ಹುಣಿಸೆಯ ಮರದ ಕೆಳಗೆ ಕುಳಿತವರು ಉಣ್ಣದ (ಸ್ತನ್ಯಪಾನ ಮಾಡದ) ಉಗಿಯದ (ಹೊರಹಾಕದ) ಅಳೆ ಯದ (ಲೋಕದ ಬಗ್ಗೆ ಚಿಂತಿಸದ) ಚರಿಸದ (ಎಲ್ಲಿಯೂ ಓಡಿಯಾಡದ) ಬಹುಕಾಲದ ವರೆಗೆ ಮಾತೂ ಆಡದ ಮೌನಿಯಾಗಿ ಮುನಿಯಾಗಿ ಬದುಕು ಮಾಡಿದವರು ನಮ್ಮ ಮಾತಿಗೆ ನಾಯ ಕರಾದವರು ನಮ್ಮ ಆಳ್ವಾರ್ ಎಂದೇ ಹೆಸರಾದ, ಆಳ್ವಾರ್ ತಿರುನಗರಿಯ ಉಡೆಯನಂಗೈ ಕಾರಿಮಾರನ್ನರ ಮಗ ಮಾರನ್ ಹುಟ್ಟಿದಾಗಲೇ ಶಠವಾಯುವನ್ನು ಹೊರಗೋಡಿಸಿದವರಾಗಿ ಶಠಾರಿ ಮಾರನ್ ಎಂಬ ಹೆಸರು ಪಡೆದವರು ಪರಾಂಕುಶರಾದವರು, ಪರಾಂಕುಶನಾಯ ಕಿಯೂ ಆದವರು

ಮಧುರ ಕವಿಗಳಿಗೆ ಸ್ವಲ್ಪ ಸಂದೇಹ - ಈ ಚೈತನ್ಯ ಯೋಗದಲ್ಲಿದಯೋ ಮಾಯೆ ಯಲ್ಲಿದೆಯೋ ಎಂಬುದಾಗಿ ಅದರ ಪರೀಕ್ಷೆಯೂ ಆಗಿ ಹೋಗಲಿ ಎಂದು ಪ್ರಶ್ನಿಸಿದರು ಏನು ತಿಂದು ಎಲ್ಲಿ ಹೋಗುತ್ತದೆ? ಮಾರನ್ನರು ಉತ್ತರಿಸಿದರು - ತನ್ನನ್ನೇ ತಿಂದುಕೊಂಡು ತನ್ನಲ್ಲಿಯೇ ಇರುತ್ತದೆ (ಅತ್ತೈ ತಿನ್ರು ಅಂಗೇ ಇರುಕ್ಕುಂ) ತತ್ವದ ತಳಗಟ್ಟು ಎಂತಹುದು ಎಂಬುದನ್ನು ಅರಿತಿದ್ದ ಅವರಿಗೆ ಜಾತಿ ಜ್ಞಾನಗಳಿಗಿಂತ ಭಕ್ತಿಯೇ ಮೇಲಾಯಿತು ಅದನ್ನೇ ಉಪದೇಶಿಸಿದರು ತಮ್ಮ ಹಾಡಲು ಬರುವ ದಿವ್ಯಪ್ರಬಂದಗಳ ಮೂಲಕ

ನಮ್ಮಾಳ್ವಾರರು ಹಾಡಿದ್ದು ನಾಲ್ಕು ಕೃತಿಗಳಲ್ಲಿ 1296 ಪಾಶುರಗಳನ್ನು ತಿರುವಾಯ್ಮೊಳಿ ಬೃಹದ್ಗ್ರಂಥ ವಾಗಬಲ್ಲದು - ಇದನ್ನು ಸಾಮವೇದದ ಸಾರವೆನ್ನುತ್ತಾರೆ ತಿರುವಿರುತ್ತಂ ನೂರು ಪಾಶುರ - ಋಗ್ವೇದದ ಸಾರವಾಗಿದ್ದು, ತಿರುವಾಶಿರಿಯಂ ಏಳೇ ಏಳು ಪಾಶುರಗಳು - ಯಜು ರ್ವೇದ ಸಾರವೆಂದು ಪ್ರಸಿದ್ಧಿ ಪೆರಿಯ ತಿರುವಂದಾದಿ ಎಂಬತ್ತೇಳು ಪಾಶುರಗಳದ್ದಾಗಿ ಅಥರ್ವ ವೇದದ ಸಾರ ನಾಲಾಯಿರ ಪ್ರಬಂಧಗಳನ್ನು ಪುನರುತ್ಥಾನಗೊಳಿಸಿದ ನಾಥಮುನಿಗಳು ಹೇಳು ವಂತೆ ವೇದಗಳನ್ನು ತಮಿಳ್ ಶೆಯ್ದವರು ಮಾರನ್ನರು ತಮಿಳು ವೇದಗಳಲ್ಲಿ ಮೊದಲಿಗೆ ಪುನಃ ಪ್ರಕಾಶವಾದದ್ದು ನಮ್ಮಾಳ್ವಾರರ ಪಾಶುರಗಳು ಎಂಬುದರಿಂದ ಇವುಗಳಿಗೆ ಹೆಚ್ಚಿನ ಮನ್ನಣೆ ಈ ಹಿನ್ನೆಲೆಯಲ್ಲಿಯೇ ನಮ್ಮಾಳ್ವಾರರನ್ನು ಮಾತ್ರವೇ ನೆಚ್ಚಿ ಕಣ್ಣಿನುಣ್ ಶಿರುತ್ತಾಂಬು ಪಾಶುರಗಳನ್ನು (ಇವು ಹತ್ತು ಪಾಶುರಗಳು) ಹಾಡಿದ ಮದುರಕವಿ ಆಳ್ವಾರರ ಮಾತಿಗೆ - ನಿಜವಾಗಿ ದೇರೊಬ್ಬ ದೇವರನ್ನು ನಾನು ತಿಳಿದಿಲ್ಲ ಕುರುಗೂರು ನಂಬಿಯ (ಆಳ್ವಾರ್ ತಿರುನಗರಿಯ ಒಡೆಯ - ನಮ್ಮಾಳ್ವಾರ್) ಹಾಡನ್ನೆ ಹೇಳಿಕೊಳ್ಳುತ್ತೇನೆ - ಪ್ರಾಧಾನ್ಯವುಂಟಾಗುತ್ತವೆ

ಹೆತ್ತ ತಾಯಿ ನೀನೆ, ಹುಟ್ಟಿಸಿದ ತಂದೆಯೂ ನೀನೆ, ಮತ್ತೆ ಬುದ್ಧಿಯನ್ನು ನೀಡುವ ಗುರುವೂ ನೀನೆ ಎಂದು ಸ್ವಾಮಿಯನ್ನು ಕುರಿತು ಹಾಡಿದ ನಮ್ಮಾಳ್ವಾರರನ್ನು ವೈಶಾಖ ಮಾಸದ ವಿಶಾಖಾ ನಕ್ಷತ್ರದಲ್ಲಿ ನೆನೆಯುವುದು ಬಂಧನವನ್ನು ಬಿಡಿಸುವಂತ ಉದ್ಯಮಕ್ಕೆ ನಾಂದಿಯಾಗಬ ಲ್ಲದು

ಮಾತಾ ಪಿತಾ ಯುವತಯ ಸ್ತನಯಾ ವಿಭೂತಿಃ
ಸರ್ವಂ ಯದೇವ ನಿಯಮೇನ ಮದನ್ವಯಾನಾಂ
ಆದ್ಯಸ್ಯ ನಃ ಕುಲಪತೇ ರ್ವಕುಳಾಭಿ ರಾಮಂ
ಶ್ರೀಮತ್ತದಂಘ್ರಿಯುಗಳಂ ಪ್ರಣಮಾಮಿ ಮೂರ್ಧ್ನಾ

# ವೈಕುಂಠದಾಸರು

- ಎಂ. ಎ. ಸಿಂಗಮ್ಮ

ವೈಕುಂರದಾಸರು ದೇಲೂರಿನವರು ದೇಲೂರಿಗೆ ವೇಲಾಪುರಿ ಎಂಬ ಹೆಸರೂ ಇದ್ದಿತು ಇವರು ಶ್ರೀವೈಷ್ಣವರಾಗಿದ್ದರು ಇವರು ದೇಲೂರಿನಲ್ಲಿಯೇ ಜನಿಸಿ ಅಲ್ಲೆ ಬೆಳೆದರು ಇವರು ವ್ಯಾಸರಾಯರು, ಪುರಂದರದಾಸರು, ಕನಕದಾಸರು, ವಾದಿರಾಜರು ಇವರುಗಳ ಸಮಕಾಲೀನರು ವೈಕುಂರದಾಸರಿಗೆ ಅವರ ಮಾತಾಪಿತೃಗಳು ತಮ್ಮ ಕ್ಷೇತ್ರಮೂರ್ತಿಯಾದ ಕೇಶವನ ಹೆಸರನ್ನೇ ಇಟ್ಟು ನಾಮಕರಣವನ್ನು ಮಾಡಿದ್ದರು ಆ ಮೇಲೆ ಅವರು ದೊಡ್ಡವನಾದಮೇಲೆ ಕೇಶವೈಯ್ಯಂಗಾರ್ ಎಂದು ಕರೆಯಲ್ಪಟ್ಟರು. ಉಪನಯನವಾದ ನಂತರ ವೇದಾಧ್ಯಯನದಲ್ಲಿಯೂ, ಕಾವ್ಯಾಭ್ಯಾಸಗಳಲ್ಲಿಯೂ ಪಾರಂಗತರಾದರು ಆದರೆ ತಮ್ಮ ಪ್ರೌಢಿಮೆಯನ್ನು ಯಾರಿಗೂ ತಿಳಿಸದೆ ಜಡನಂತೆ ಇರುತ್ತಿದ್ದರು ದೇವರ ಕಥೆಗಳನ್ನು ಕೇಳಿದಾಗ ಭಾವಸಮಾಧಿಗೊಳಗಾಗುತ್ತಿದ್ದರು

ಇವರು ನಿತ್ಯವೂ ಬೆಳಗ್ಗೆ ಎದ್ದು ವಿಷ್ಣು ಸಮುದ್ರದಲ್ಲಿ ಸ್ನಾನ ಮಾಡಿ, ದೇವಸ್ಥಾನದಲ್ಲಿ ಕಾಲಕಳೆಯುತ್ತಾ ಅಲ್ಲಿ ಒಂದು ಏಕಾಂತ ಸ್ಥಳದಲ್ಲಿ ಕುಳಿತು ಧ್ಯಾನಮಾಡುತ್ತಿದ್ದರು ಜನರೊಡನೆ ಬೆರೆಯುತ್ತಿರಲಿಲ್ಲ, ಆದರೆ ಮಂಕರಾಗಿರಲಿಲ್ಲ ಅವರು ಯಾವಾಗಲೂ ದಿವ್ಯಪ್ರಬಂಧಗಳನ್ನು ಇಂಪಾಗಿ ಹಾಡುತ್ತಾ, ಮುಕುಂದಮಾಲಾಸ್ತೋತ್ರವನ್ನು ಹೇಳುತ್ತಾ ಕೇಶವಸ್ವಾಮಿಗೆ ಪುಷ್ಪಗಳನ್ನು ಕಟ್ಟಿ ಸಮರ್ಪಿಸುತ್ತಿದ್ದರು ಅನೇಕ ವೇಳೆ ದೇವರ ಪ್ರಸಾದದಲ್ಲಿಯೇ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರು ಅವರಿಗೆ ಅಲ್ಲಿಯ ದೇವರಾದ ಕೇಶವನಿಗೆ ತಾವು ಸಖನಂತೆ, ಸೇವಕನಂತೆ, ಶಿಷ್ಯನಂತೆ ಇರಬೇಕೆಂಬ ಆಸೆಯಿದ್ದಿತು

ಪ್ರಾಪ್ತವಯಸ್ಕರಾಗಲು, ಅವರ ಮಾತಾಪಿತೃಗಳು ಅವರಿಗೆ ಸೌಮ್ಯನಾಯಕಿ ಎಂಬ ಕನ್ನೆಯೊಂದಿಗೆ ವಿವಾಹವನ್ನು ಮಾಡಿದರು ಆದರೆ ಅವರ ಮನಸ್ಸು ವಿವಾಹದ ಬಂಧನದಿಂದ ಯಾವ ರೀತಿಯ ಪರಿವರ್ತನೆಯನ್ನು ಹೊಂದಲಿಲ್ಲ ಅವರು ಹೆಂಡತಿಯನ್ನು ಪ್ರೀತಿಸಿ ಸಂಸಾರವನ್ನು ಮಾಡಲಿಲ್ಲ ಆದರೆ ಅವಳು ಅವರ ಮನಸ್ಸನ್ನು ಅರಿತು ಅವರಿಂದ ಏನನ್ನೂ ಅಪೇಕ್ಷಿಸದೆ ಅವರಿಗೆ
ಸೇವೆ ಮಾಡುತ್ತಿದ್ದಳು ಈ ದಂಪತಿಗಳ ಪರಿಪಕ್ವವಾದ ಸ್ಥಿತಿಯನ್ನು ನೋಡಿ ಪ್ರೀತನಾದ ಕೇಶವಸ್ವಾಮಿಯು ಅವರಿಗೆ ಸುಖವಾಗಿರುವಂತೆ ಅನುಗ್ರಹಿಸಿ ಕೇಶವೈಯಂಗಾರ್ಯರ ತಲೆಯಮೇಲೆ ತನ್ನ ಹಸ್ತವನಿಟ್ಟು ಆಶೀರ್ವದಿಸಿದನು ಅದರ ಫಲವಾಗಿ ಕೇಶವೈಯ್ಯಂಗಾರ್ಯರು ವೈಕುಂರಕೇಶವ ಮುದ್ರಿಕೆಯಿಂದ ದೇವರ ನಾಮಗಳನ್ನು ರಚಿಸಿ ವೈಕುಂರದಾಸ ರೆಂಬ ಹೆಸರನ್ನು ಪಡೆದರು ಮುಂದೆ ಕಾಲಕ್ರಮದಲ್ಲಿ ಅವರ ಅಯ್ಯಂಗಾರ್ಯರೆಂಬ ಹೆಸರು ಅಳಿಸಿಹೋಗಿ ಅವರಿಗೆ ವೈಕುಂರದಾಸರೆಂಬ ಹೆಸರಾಯಿತು ಇವರೂ ಇವರ ಜೀವನದಲ್ಲಿ ಅನೇಕ ಪವಾಡಗಳನ್ನು ನಡೆಸಿದರು

ಸಾಮಾನ್ಯ ಸ್ಥಳಗಳೆಲ್ಲಾ ಮಹಾಪುರುಷರ ವಾಸಸ್ಥಾನವಾದಾಗ ಮಹಾಸ್ಥಳಗಳಾಗುತ್ತವೆ ಅಂತೆಯೇ ಮನಃಶಕ್ತಿಯ ಬಲದಿಂದಲೂ, ಭಗವಂತನ ದಯಯಿಂದಲೂ ಮಹಾತ್ಮರುಗಳು ಅನೇಕ ಕೆಲಸಗಳನ್ನು ನಡೆಸುವರು ಅವರ ಮನಃಶಕ್ತಿಯಿಂದ ವೈಕುಂರದಾಸರು ಭಗವಂತ ಲೀಲಾವಿನೋದಗಳನ್ನು ಅನುಭವಿಸಿದರು ಅತ್ರಿಯವರ ಪತ್ನಿ ಅನುಸೂಯೆಯಂತೆ ಇವರ ಪತ್ನಿ ಸೌಮ್ಯನಾಯಕಿಯೂ ತನ್ನ ಮನಃಶಕ್ತಿಯಿಂದ ಶ್ರೀಕೃಷ್ಣನ ಬಾಲಲೀಲೆಗಳನ್ನು ಅನುಭವಿಸಿದಳು ಕಾಲಕ್ರಮದಲ್ಲಿ ಈ ದಂಪತಿಗಳಿಗೆ ಒಬ್ಬ ಹೆಣ್ಣುಮಗಳು ಹುಟ್ಟಿದ್ದಳೆಂದು ತಿಳಿದುಬರುತ್ತದೆ ದಾಸರು ದೈವಾನುಗ್ರಹದಿಂದ ಮುಂದಕ್ಕೆ ಬರಲು ಅವರನ್ನು ಹೀಯಾಳಿಸುತಿದ್ದ ಅನೇಕರು ಅವರ ದೈವಿಕ ಶಕ್ತಿಯನ್ನು ಕಂಡು ಅವರ ಶಿಷ್ಯರಾದರು ಬ್ರಾಹ್ಮಣರು ಮಾತ್ರವೇ ಅಲ್ಲದೆ ಅವರ ಭಜನಗೋಷ್ಠಿಯಲ್ಲಿ ಎಲ್ಲಾ ಜಾತಿಯವರೂ ಇರುತ್ತಿದ್ದರು ಇವರು ಶ್ರೀವೈಷ್ಣವರಾಗಿದ್ದುದರಿಂದ ಶ್ರೀರಾಮಾನುಜಾಚಾರ್ಯರು ಕೊಂಡಾಡಿ ಓಡಾಡಿದ ಕಾಂಚೀಪುರ, ಶ್ರೀರಂಗದಲ್ಲಿನ ಅರ್ಚಾಮೂರ್ತಿಗಳ ದರ್ಶನವನ್ನು ಮಾಡಬೇಕೆಂಬ ಬಯಕೆ ಇವರಿಗೆ ಉಂಟಾಗಲು ಇವರು ಶ್ರೀರಂಗ ಯಾತ್ರೆಯನ್ನು ಕೈಕೊಂಡರು ಆದರೆ ಯಾತ್ರೆಯ ಮಧ್ಯದಲ್ಲಿಯೇ ಅವರ ಮನೆಯ ದೇವರಾದ ಕೇಶವನು ತಾನಿರುವ ಸ್ಥಳವೇ ಶ್ರೀರಂಗವೆಂದು ಭಾವಿಸಬೇಕೆಂದು ತಿಳಿಸಲು ಅವರು ಹಿಂತಿರುಗಿ ಮತ್ತೆ ದೇಲೂರಿಗೇ ವಾಪಸ್ಸು ಬಂದುಬಿಟ್ಟರು ಅನಂತರ ಆ ಊರನ್ನು ಬಿಟ್ಟು ಎಲ್ಲಿಗೂ ಯಾತ್ರೆ ಹೊರಡಲಿಲ್ಲ ಈ ವಿಷಯಗಳೆಲ್ಲವೂ ಅವರ ದೇವರ ನಾಮಗಳಿಂದ ತಿಳಿದುಬರುತ್ತದೆ ಒಮ್ಮೆ ದಾಸರು ದೇವಸ್ಥಾನಕ್ಕೆ ಬರುವುದಕ್ಕೆ ಮುಂಚೆಯೇ ಆರಾಧನೆಯನ್ನು ಮುಗಿಸಿ ದೇವಸ್ಥಾನದ ಬಾಗಿಲನ್ನು ಹಾಕಿಬಿಟ್ಟಿದರು ದಾಸರು ಭಗವಂತನನ್ನು ಸ್ತೋತ್ರಮಾಡಲು ಬಾಗಿಲು ತಾನಾಗಿಯೇ ತೆಗೆದುಕೊಂಡಿತು

ದೇವಸ್ಥಾನದಲ್ಲಿ ಪ್ರತಿನಿತ್ಯವೂ ವೈಕುಂರದಾಸರು ದೇವರ ನಾಮಗಳನ್ನು ಹಾಡಿ ಆದ ಮೇಲೆಯೇ ಮಂಗಳಾರತಿಯು ಆಗುತ್ತಿದ್ದಿತು ಅವರ ದೇವರ ನಾಮವಿಲ್ಲದೆ ಎಂದೂ ಮಂಗಳಾರತಿಯು ಆಗುತ್ತಿರಲಿಲ್ಲ ಒಂದು ದಿವಸ ವಿಪರೀತ ಮಳೆಯು ಬಂದು ವೈಕುಂರ ದಾಸರ ಜೊತೆಯಲ್ಲಿ ನಿತ್ಯವೂ ಬರುತ್ತಿದ್ದ ದೀವಟಿಗನು ಬರದೆ ಇರಲು, ಕೇಶವನೇ ದೀವಟಿಗನ ರೂಪದಲ್ಲಿ ಬಂದು ದಾಸರನ್ನು ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಮಹಾಮಂಗಳಾರತಿಯು ಆದ ನಂತರ ಅದೃಶ್ಯನಾಗಿಬಿಟ್ಟನು ಇದು ದಾಸರಿಗೆ ಅರಿವಾಗಿ ಅವರು ಕೇಶವನ ಕರುಣೆಗೆ ಬೆರಗಾಗಿ ಅವನ ಪ್ರಾರ್ಥನರೂಪ



ವಾಗಿ ಅನೇಕ ದೇವರ ನಾಮಗಳನ್ನು ರಚಿಸಿ ಹಾಡಿದರು ಇದೇ ರೀತಿ ಮತ್ತೊಂದು ದೀನ ಕೇಶವನು ದೀವಟಿಗನಾಗಿ ಬಂದು ದಾಸರಿಂದ ಪಾರಿತೋಷಿಕವಾಗಿ ಕಜ್ಜಾಯಗಳನ್ನು ಪಡೆದು ದೇವಸ್ಥಾನದಲ್ಲಿ ಎಲ್ಲರ ಮುಂದೆಯೂ ಪ್ರದರ್ಶಿಸಿ ಅನಂತರ ಅಂತರ್ಧಾನನಾದನು ಈ ಕೌತುಕವೆಲ್ಲವನ್ನೂ ನೋಡಿದ ವೈಕುಂಠದಾಸರ ಶಿಷ್ಯರು ಇದೆಲ್ಲವೂ ಭಗವಂತನ ಲೀಲೆಯೆಂದು ಅರಿತು ವೈಕುಂಠದಾಸರಲ್ಲಿ ಹೆಚ್ಚು ಮರ್ಯಾದೆಯನ್ನೂ, ಭಕ್ತಿಯನ್ನೂ ಹೊಂದಿದರು

ಹಿಂದೆ ಪುರಂದರ ದಾಸರಿಗೆ ಅಪ್ಪಣ್ಣನೆಂಬ ಶಿಷ್ಯನಿದ್ದಂತೆ ವೈಕುಂಠದಾಸರಿಗೆ ವರದನೆಂಬ ಚಿಕ್ಕವಯಸ್ಸಿನ ಒಬ್ಬ ಶಿಷ್ಯನಿದ್ದನು ಅವನು ಇವರು ರಚಿಸಿ ಹಾಡಿದ ದೇವರ ನಾಮಗಳೆಲ್ಲವನ್ನೂ ತಪ್ಪದೆ ಬರೆದಿಡುತ್ತಿದ್ದನು.

ಒಮ್ಮೆ ವೈಕುಂಠದಾಸರು ವರದನನ್ನು ತಮ್ಮ ಹತ್ತಿರ ಇದ್ದ ಗೋವುಗಳ ದಾನವನ್ನು ಸ್ವೀಕರಿಸಲು ಬ್ರಾಹ್ಮಣರನ್ನು ಕರೆತರುವಂತೆ ಹೇಳಲು, ಕೇಶವನ ದಯೆಯಿಂದ ಅನೇಕ ಬ್ರಾಹ್ಮಣರು ಬಂದು ದಾನವನ್ನು ಸ್ವೀಕರಿಸಿದರು ಹೀಗೆ ದಿನದಿನಕ್ಕೆ ಭಗವಂತನ ಮಹಿಮೆಯನ್ನು ನಾನಾರೀತಿಯಲ್ಲಿ ಕಂಡ ಅವರ ಶಿಷ್ಯರು ಇವೆಲ್ಲವೂ ವೈಕುಂಠದಾಸರ ಮಹಿಮೆ ಎಂಬುದನ್ನು ಚೆನ್ನಾಗಿ ಅರಿತರು. ಅನಂತರ ಅನೇಕರು ಬಂದು ಇವರ ಶಿಷ್ಯರಾಗಿ ಕೇಶವನ ಸ್ಮರಣೆಯಲ್ಲಿಯೇ ತಮ್ಮ ಕಾಲವನ್ನು ಕಳೆಯುತ್ತಿದ್ದರು ಇದರಿಂದ ಬೇಲೂರು ಅಂದರೆ ವೇಲಾಪುರಿಯು, ಭೂವೈಕುಂಠವಾಯಿತು

ನಂಜುಂಡನೆಂಬ ಕೇಶವ ಭಕ್ತನು ದಿನವೂ ತಾಳೇವನಕ್ಕೆ ಹೋಗಿ ದೇವರಿಗೆ ಪುಷ್ಪಗಳನ್ನು ಸಂಗ್ರಹಿಸಿ ತರುತ್ತಿದ್ದನು ಅದನ್ನು ಅವನ ತಾಯಿಯಾದ ಶರಣೆ ಯಾದಮ್ಮನು ದೊಡ್ಡದಾದ ಹಾರವನ್ನಾಗಿ ಕಟ್ಟಿ ನಿತ್ಯವೂ ಬೇಲೂರು ಕೇಶವನಿಗೆ ಸಮರ್ಪಿಸುತ್ತಿದ್ದಳು ಹೀಗೆಯೇ ಕೆಲವು ಕಾಲ ನಡೆಯಿತು ಒಂದು ದಿವಸ ನಂಜುಂಡನು ನಿತ್ಯದಂತೆ ಪುಷ್ಪವನ್ನು ಸಂಗ್ರಹಿಸಲು ತಾಳೇವನದಲ್ಲಿ ಬಂದು ದೊಡ್ಡಮರವನ್ನು ಹತ್ತಿ ಪುಷ್ಪಗಳನ್ನು ಕಿತ್ತುತ್ತಿದ್ದನು ಆ ದಿವಸ ದುರದೃಷ್ಟದಿಂದ ಮರದಲ್ಲಿದ್ದ ಒಂದು ಸರ್ಪವು ಅವನನ್ನು ಕಚ್ಚಲು ಅವನು ಮರದ ಮೇಲಿನಿಂದ ಕೆಳಗೆ ಬಿದ್ದುಬಿಟ್ಟನು ಅವನಿಗೆ ಮೂರ್ಛೆಯುಂಟಾಗಿ ಅಲ್ಲಿ ಯಾವ ಚಿಕಿತ್ಸೆಯೂ ನಡೆಯಲು ಸಾಧ್ಯವಾಗದೆ ಮೃತನಾದನು ಈ ವಿಷಯವನ್ನು ನಂಜುಂಡನ ಸ್ನೇಹಿತರು ಅವನ ತಾಯಿಯಾದ ಯಾದಮ್ಮನಿಗೆ ತಿಳಿಸಲು ಅವಳು ಭಯದಿಂದಲೂ ದುಃಖದಿಂ

ದಲ್ಲಿ ಮಗನು ಮೃತನಾಗಿ ಬಿದ್ದಿದ್ದ ಜಾಗಕ್ಕೆ ಓಡೋಡಿಬಂದು ರೋದಿಸಿದಳು ವೈಕುಂಠದಾಸರನ್ನು ಕಂಡು ಹೇಗಾದರೂ ಮಾಡಿ ತನ್ನ ಮಗನನ್ನು ಬದುಕಿಸಿಕೊಡಬೇಕೆಂದು ಪ್ರಾರ್ಥಿಸಿದಳು

ಆಗ ವೈಕುಂಠದಾಸರು ಕೇಶವನನ್ನು ಸ್ತೋತ್ರ ಮಾಡಿ ನಂಜುಂಡನನ್ನು ಬದುಕಿಸುವಂತೆ ಪ್ರಾರ್ಥಿಸಿದರು ಹಾಗೆ ಅವನನ್ನು ಬದುಕಿಸದಿದ್ದರೆ ತಾವು ಪ್ರಾಣವನ್ನು ಬಿಡುವುದಾಗಿ ತಿಳಿಸಿ ಅಲ್ಲಿದ್ದ ಕಲ್ಲಿನ ಕಂಬಕ್ಕೆ ತಮ್ಮ ತಲೆಯನ್ನು ಹೊಡೆದುಕೊಂಡರು ಆಗ ಇದನ್ನು ನೋಡಿ ದಯಾವಂತನಾದ ಕೇಶವನು ವೈಕುಂಠದಾಸರಿಗೆ ತಮ್ಮ ತೀರ್ಥವನ್ನು ನಂಜುಂಡನಿಗೆ ಪ್ರೋಕ್ಷಿಸುವಂತೆ ತಿಳಿಸಿದನು ಅನಂತರ ವೈಕುಂಠದಾಸರು ನಂಜುಂಡನಿಗೆ ಭಗವಂತನ ಶರೀರಿಯನ್ನು ಸ್ಪರ್ಶಿಸಿ ತೀರ್ಥವನ್ನು ಪ್ರೋಕ್ಷಣೆ ಮಾಡಲು ನಂಜುಂಡನು ಬದುಕಿ ಎದ್ದು ಕುಳಿತನು ಯಾದಮ್ಮನ ಸಂತೋಷಕ್ಕೆಪಾರವೇ ಇರಲಿಲ್ಲ ಅಲ್ಲಿ ಸುತ್ತಲೂ ನೆರದಿದ್ದ ಜನರು ವೈಕುಂಠದಾಸರ ಈ ಮಹಿಮೆಯನ್ನು ನೋಡಿ ಆಶ್ಚರ್ಯದಿಂದ ದೆರಗಾಗಿ ಅವರ ಪಾದಕ್ಕೆರಗಿ ಕೇಶವನ ಸ್ಮರಣೆಯಲ್ಲಿ ನಿರತರಾದರು ವೈಕುಂಠದಾಸರ ಭಗವದ್ಭಕ್ತಿಗೆ ಇದೊಂದು ನಿದರ್ಶನವಾಯಿತು

ಆ ಕಾಲದಲ್ಲಿ ಅಚ್ಯುತದಾಸರೆಂಬುವರು ಬಹಳ ಶಾಸ್ತ್ರ ವ್ಯಾಸಂಗಮಾಡಿ ಪಂಡಿತರಾಗಿಯೂ ಒಳ್ಳೆಯ ಕೀರ್ತನ ಕಾರರಾಗಿಯು ಇದ್ದರು ಇವರಿಗೆ ತಮಗೆ ಖ್ಯಾತಿಬರಬೇಕೆಂಬ ಆಸೆಯಿಂದ ತಮ್ಮ ಬಿರುದಾವಳಿಯನ್ನು ಎಲ್ಲರಿಗೂ ತೋರಿಸುತ್ತಾ ಎಲ್ಲ ಪಂಡಿತರನ್ನೂ ಸೋಲಿಸಿ ಎಲ್ಲರಿಂದಲೂ ಜಯ ಪತ್ರಿಕೆಗಳನ್ನು ಬರೆಸಿಕೊಂಡು ಬಹಳ ಗರ್ವಿಷ್ಠರಾಗಿ ದೇಶ ಸಂಚಾರ ಮಾಡುತ್ತಿದ್ದರು ಅನಂತರ ಅವರು ದೇಲೂರಿಗೆ ಬಂದಾಗ ವೈಕುಂಠದಾಸರನ್ನೂ ತಮ್ಮ ಜೊತೆಯಲ್ಲಿ ವಾದಕ್ಕೆ ಬರುವಂತೆ ಆಹ್ವಾನಿಸಿದರು ಆಗ ವೈಕುಂಠದಾಸರು ಇವರ ಅಹಂಕಾರವನ್ನು ಮುರಿಯಬೇಕೆಂದು ಯೋಚಿಸಿ ತಮ್ಮ ಜೊತೆಯಲ್ಲಿ ವಾದಮಾಡಬೇಕಾದರೆ "ಕಣ್ಣನ್ನು ಮುಚ್ಚಿಕೊಂಡು ಬಾಯನ್ನು ಮುಚ್ಚಿಕೊಂಡು ಇರಬೇಕು" ಎಂದು ತಮ್ಮ ಶಿಷ್ಯನಾದ ವರದನ ಹತ್ತಿರ ಹೇಳಿ ಕಳುಹಿಸಿದರು ಆದರೆ ವರದನು ಅಲ್ಲಿಬಂದು ಅಚ್ಯುತದಾಸರನ್ನು ನೋಡುವವೇಳೆಗೆ ಅಚ್ಯುತದಾಸರಿಗ ಕಣ್ಣು ಕಾಣದೆ, ಮಾತನಾಡಲು ನಾಲಿಗೆಯು ಚಲಿಸದೆ ಕೈಸನ್ನೆಯು ಆರಂಭವಾಯಿತು ಹೀಗೆ ತಮಗೆ ಆಗಲು ಕಾರಣವೇನೆಂದು ಅರಿಯದೆ ಅಚ್ಯುತದಾಸರು ಚಿಂತಾಕ್ರಾಂತರಾದರು ಅನಂತರ ತಾವು ಅಹಂಕಾರದಿಂದ ವೈಕುಂಠದಾಸರಿಗೆ ಮಾಡಿದ ದ್ರೋಹದಿಂದ ಈ ರೀತಿ ಆಗಿದೆ ಎಂಬುದನ್ನು ಅರಿತುಕೊಂಡು ಅಚ್ಯುತದಾಸರು ವೈಕುಂಠದಾಸರ ಕ್ಷಮಾಪಣೆಯನ್ನು ಕೇಳಿ ಅವರಿಗೆ ಶರಣಾಗತರಾದರು ಅವರ ಈ ಸ್ಥಿತಿಯನ್ನು ನೋಡಿ ಮನಮರುಗಿ ವೈಕುಂಠದಾಸರು ತಮ್ಮ ಕೇಶವನನ್ನು ಅಚ್ಯುತದಾಸರಿಗೆ ಕಣ್ಣು ನಾಲಿಗೆಗಳನ್ನು ಕೃಪೆ ಮಾಡಿ ದಯಪಾಲಿಸುವಂತೆ ಪ್ರಾರ್ಥಿಸಿದರು ಕೇಶವನು ಕೃಪೆಮಾಡಿ ಅಚ್ಯುತದಾಸರಿಗೆ ಹೋದ ಕಣ್ಣು ನಾಲಿಗೆಗಳು ಬಂದವು. ಇದರಿಂದ ವೈಕುಂಠದಾಸರ ಶಕ್ತಿಯನ್ನು ಅರಿತುಕೊಂಡ ಅಚ್ಯುತದಾಸರು ತಮ್ಮ ಬಿರುದಾವಳಿಗಳನೆಲ್ಲಾ ವೈಕುಂಠದಾಸರಿಗೆ ಒಪ್ಪಿಸಿ, ಅವರಲ್ಲಿ ಶರಣರಾದರು

ವೈಕುಂಠದಾಸರು ಕೇಶವನ ವಿಚಿತ್ರಲೀಲೆಗಳನ್ನು ಅನುಭವಿಸುತ್ತಾ ಯಾವಾಗಲೂ ಬಗವದಾನಂದವನ್ನು ಅನುಭವಿಸುತ್ತಿದ್ದರು ವರದನು ಇವರ ಶಿಷ್ಯನಾಗಿ ಇವರ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದನು ವರದನು ಇಲ್ಲದಿದ್ದಾಗ ಕೇಶವನೇ ವೈಕುಂಠದಾಸರ ಕೆಲಸಗಳನ್ನೆಲ್ಲಾ ಮಾಡಿಕೊಡುತ್ತಿದ್ದನು ಉತ್ಸವಕಾಲದಲ್ಲಿ ವೈಕುಂಠದಾಸರು ಭಜನೆ ಮಾಡುತ್ತಾ ಹೋಗುತ್ತಿದ್ದರೆ ಕೇಶವನು ತನ್ನ ವಿಶ್ವರೂಪವನ್ನು ತೋರಿಸಿದನಂತೆ ಈ ರೀತಿ ವೈಕುಂಠದಾಸರ ಜೀವನವು ಲೋಕದಲ್ಲೆಲ್ಲಾ ಪ್ರಖ್ಯಾತವಾಯಿತು ಇವರ ವೃದ್ಧಾಪ್ಯದಲ್ಲಿ ವಾದಿರಾಜರೂ ದೇಲೂರಿಗೆ ಬಂದು ಇಬ್ಬರೂ ಭಗವಂತನ ವಿಚಿತ್ರ ವ್ಯಾಪಾರಗಳನ್ನು ನೋಡಿ ಆನಂದಿಸುತ್ತಿದ್ದರು ವೈಕುಂಠದಾಸರು ಎಪ್ಪತ್ತು ವರ್ಷಗಳ ಕಾಲ ಜೀವಿಸಿ ಅನೇಕ ದೇವರ ನಾಮಗಳನ್ನು ರಚಿಸಿ ಜನಗಳಿಗೆ ಅನುಗ್ರಹಿಸಿದರು ಅವರು ಕೇಶವನ ಧ್ಯಾನವನ್ನು ಮಾಡುತ್ತಾ ಅವನ ಪಾದಾರವಿಂದವನ್ನು ಸೇರಿದರು



# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಟ್ರಸ್ಟ್

## ತಿ. ತಿ. ದೇವಸ್ಥಾನಗಳ ಪರಿಪಾಲನಾ ಭವನ, ಕೆ. ಟಿ. ರಸ್ತೆ, ತಿರುಪತಿ, (ಆಂ.ಪ್ರ.),

## (ನೋಂದಣಿ ಸಂಖ್ಯೆ - 18/94)

**ಡಾ|| ಐ. ವಿ. ಸುಬ್ಬಾರಾವ್,** ಐ ಎ ಎಸ್,

ಕಾರ್ಯನಿರ್ವಹಣಾಧಿಕಾರಿ

ಪ್ರಿಯ ದಾನಿಗಳೆ;

ಅನ್ನದಾನಕ್ಕಿಂತ ಇನ್ನು ದಾನಗಳಿಲ್ಲ ನಮ್ಮ ದೇಶದಲ್ಲಿ ಅಗತ್ಯವಿದ್ದವರಿಗೆ, ಹಸಿದವರಿಗೆ ಅನ್ನದಾನ ಮಾಡುವುದು ಒಂದು ಸೇವೆ ಮಾತ್ರವೇ ಅಲ್ಲ, ವೇದಕಾಲದಿಂದಲೂ ಪರಂಪರೆಯಾಗಿ ಆಚರಣೆಯಲ್ಲಿರುವ ಪವಿತ್ರ ಕಾರ್ಯವಾಗಿದೆ ಅನ್ನದಾನ ಮಾಡುವವರು ದೇವತೆಗಳ ಸಮರಾಗುವರೆಂದು ಹೇಳಲಾಗಿದೆ

ತಿರುಮಲೆಗೆ ಆಗಮಿಸುವ ಯಾತ್ರಿಕರಿಗೆ ಉಚಿತವಾದ ಹಾಗೂ ಆರೋಗ್ಯಕರವಾದ ಭೋಜನವನ್ನು ನೀಡುವ ಉದ್ದೇಶದಿಂದ ಶ್ರೀ ವೆಂಕಟೇಶ್ವರ ಅನ್ನದಾನ ಟ್ರಸ್ಟ್ 1985 ರಲ್ಲಿ ತಿ ತಿ ದೇವಸ್ಥಾನಗಳಿಂದ ಆರಂಭವಾಯಿತು ಇದಕ್ಕೆ ಭಾರತದ ಎಲ್ಲೆಡೆಗಳಿಂದಲೂ ದಾತರ ಉತ್ಸಾಹಪೂರ್ಣವಾದ ಬೆಂಬಲ ಕಂಡುಬಂದಿದೆ

## ಈ ಯೋಜನೆಯ ವಿವರಗಳು

I ವ್ಯಕ್ತಿ, ಸಂಘ, ಸಂಸ್ಥೆಗಳವರು ವೈಯಕ್ತಿಕವಾಗಿ ಅಥವಾ ಎರಡೆರಡು ಸಂಘ ಸಂಸ್ಥೆಗಳು ಐದುಲಕ್ಷ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ದಾನ ಮಾಡಬಹುದು.

1 ದಾನಿಗಳ ಹೆಸರನ್ನು ಎದ್ದು ಕಾಣುವಂತೆ ಉಚಿತ ಭೋಜನದ ಕೋಣೆಗಳಲ್ಲಿ ಬರೆಸಿಡಲಾಗುವುದು

2 ಸ್ವಾಮಿಯ ಓಲಗದಲ್ಲಿ ದಾನಿಗಳ ಗೋತ್ರವನ್ನು, ಹೆಸರನ್ನು ಆವರ್ತನ ಪದ್ಧತಿಯಲ್ಲಿ ಹೇಳಲಾಗುವುದು

3 ದಾನಿಗಳಿಗೆ ವರ್ಷಕ್ಕೆ ಒಮ್ಮೆ ಮೂರುದಿನಗಳಕಾಲ ತಿರುಮಲೆಯಲ್ಲಿ ಉಚಿತ ಸುಸಜ್ಜಿತ ವಸತಿ ನೀಡಲಾಗುವುದು

4 ಈ ಮೂರು ದಿನಗಳಲ್ಲಿಯೂ, ದಾನಿಯ ಐದುಮಂದಿಗೆ ಉಚಿತವಾಗಿ ಆರತಿ ಸಹಿತ ದರ್ಶನವನ್ನು ಏರ್ಪಡಿಸಲಾಗುವುದು.

5 ದಾನಿಗಳಿಗೆ ಒಮ್ಮೆ ಮಾತ್ರವೇ ಸ್ವಾಮಿಯ ಹಾಗೂ ಅಮ್ಮನವರ ಬಂಗಾರದ ಮುಲಾಮಿನ ಪ್ರತಿಮೆಗಳ ಜ್ಞಾಪಿಕೆಯನ್ನು ನೀಡಲಾಗುವುದು

6 80 (ಜಿ) ಕಲಮು ಹೇಳುವಂತೆ ಈ ದಾನವು ಆದಾಯಕರ ಮುಕ್ತವಾಗಿರುತ್ತದೆ

ದಾನಿಯು ನೀಡುವ ಹಣಕ್ಕೆ ಸಮನಾದ ಹಣವನ್ನು ತಿ ತಿ ದೇ ತಮ್ಮ ವತಿಯಿಂದ ಸೇರಿಸಿ ಇಡೀ ಮೊತ್ತವನ್ನು ಬ್ಯಾಂಕಿನಲ್ಲಿ ಠೇವಣಿಯಾಗಿಟ್ಟು ಅದರ ಮೇಲಿನ ಬಡ್ಡಿ ಹಣವನ್ನು ಮಾತ್ರವೇ ಪ್ರತಿನಿತ್ಯ 15,000 ಮಂದಿಗೆ ಉಚಿತ ಭೋಜನ ನೀಡಲು ಬಳಸಲಾಗುವುದು

II ಎಸ್ ವಿ ನಿತ್ಯಾನ್ನದಾನಯೋಜನೆ ತಮ್ಮ ವಂತಿಗೆಯಾಗಿ ಒಂದುಸಾವಿರ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ವಂತಿಗೆಯನ್ನು ನೀಡಿ 80 (ಜಿ ) ಕಲಮಿನನ್ವಯ ಆದಾಯಕರ ವಿಮುಕ್ತಿಯನ್ನು ಪಡೆಯಿರಿ

## ದಾನಗಳನ್ನು ಹೇಗೆ ಕಳುಹಿಸಬೇಕು :

ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ "ಶ್ರೀ ವೆಂಕಟೇಶ್ವರ ನಿತ್ಯಾನ್ನದಾನ ಟ್ರಸ್ಟ್" ಹೆಸರಿನಲ್ಲಿ ಡಿ ಡಿ ಯನ್ನು ಪಡೆದು ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ , ತಿರುಪತಿ, ಆಂಧ್ರಪ್ರದೇಶ ಇವರಿಗೆ ಕಳುಹಿಸಬೇಕು

ಹೆಚ್ಚಿನ ಮಾಹಿತಿಗಾಗಿ ಬರೆಯಿರಿ

ಕಾರ್ಯನಿರ್ವಹಣಾಧಿಕಾರಿ,

ತಿ ತಿ ದೇ ಪರಿಪಾಲನಾಭವನ - ತಿರುಪತಿ - 517 501

ನಿತ್ಯಾನ್ನದಾನ ಯೋಜನೆಯಲ್ಲಿ ಭಾಗವಹಿಸಿರಿ

ಉತ್ತಮ ಉನ್ನತ ಸೇವೆಯಲ್ಲಿ ಪಾಲುದಾರರಾಗಿರಿ

# ಭಕ್ತಿಯೋಗ

- ಕೆ ಎಸ್ ಶ್ರೀವತ್ಸ

ಭಗವದ್ಗೀತೆಯ ೧೨ ನೇ ಅಧ್ಯಾಯವನ್ನು ಭಕ್ತಿ ಯೋಗವೆಂದು ಕರೆದಿದ್ದಾರೆ ಇತರ ಅನೇಕ ಅಧ್ಯಾಯಗಳಲ್ಲಿಯೂ ಸಹ, ಭಕ್ತಿಯ ಬಗ್ಗೆ ವಿವರಣೆಗಳು ಇದ್ದಾಗ್ಯೂ, ಈ ಅಧ್ಯಾಯಕ್ಕೆ ಪ್ರತ್ಯೇಕವಾಗಿ ಭಕ್ತಿ ಯೋಗವೆಂದು ಹೆಸರಿಡಲಾಗಿದೆ ಇದಕ್ಕೆ ಕಾರಣವೂ ಇಲ್ಲದಿಲ್ಲ ಅರ್ಜುನನು ತನ್ನ ಸಂದೇಹವನ್ನು ನಿವಾರಿಸುವ ಸಲುವಾಗಿ, ಶ್ರೀಕೃಷ್ಣನನ್ನು ಅವ್ಯಕ್ತೋಪಾಸನೆ ಶ್ರೇಷ್ಠವೋ ಅಥವಾ ವ್ಯಕ್ತ ಸ್ವರೂಪನಾದ ಇಷ್ಟದೇವತೆಯ ಉಪಾಸನೆ ಶ್ರೇಷ್ಠವೋ ಎಂಬ ಪ್ರಶ್ನೆಯನ್ನು ಕೇಳಿದಾಗ, ಆ ಪ್ರಶ್ನೆಗೆ ನೇರವಾಗಿ ಉತ್ತರಿಸದೆ, ಅವ್ಯಕ್ತೋಪಾಸನೆಯು ಕಷ್ಟಕರವಾದದ್ದು, ಆದ್ದರಿಂದ ಅದೇ ಫಲವನ್ನು ಭಕ್ತಿಮಾರ್ಗವನ್ನು ಅನುಸರಿಸಿ, ವ್ಯಕ್ತ ಸ್ವರೂಪನಾದ ಪರಮಾತ್ಮನನ್ನು ಇಷ್ಟದೇವತೆಯ ರೂಪದಲ್ಲಿ ಉಪಾಸಿಸಿ ಪಡೆಯಬಹುದು ಎಂದು ಹೇಳಿ ಭಕ್ತಿಮಾರ್ಗದ ಶ್ರೇಷ್ಠತೆಯನ್ನು ಎತ್ತಿ ಹಿಡಿದಿದ್ದಾನೆ

ಒಬ್ಬ ನಿಜವಾದ ಭಕ್ತನ ಲಕ್ಷಣಗಳನ್ನು ಕೆಲವು ಶ್ಲೋಕಗಳಲ್ಲಿ ಬಹಳ ಸುಂದರವಾಗಿ ವರ್ಣಿಸಲಾಗಿದೆ

"ಯಾವನು ಸರ್ವ ಪ್ರಾಣಿಗಳನ್ನೂ ದ್ವೇಷಿಸುವುದಿಲ್ಲವೋ, ಮಿತ್ರಭಾವದಿಂದ ಕೂಡಿರುವನೋ, ಕರುಣೆಯುಳ್ಳವನೋ, ಅಹಂಕಾರ ಮಮಕಾರ ರಹಿತನೋ, ಸುಖದುಃಖಗಳಲ್ಲಿ ಸಮಾನನಾಗಿರುವವನೋ, ಕ್ಷಮಾಶೀಲನೋ, ಯಾವಾಗಲೂ ಸಂತುಷ್ಟನೋ, ಯೋಗಿಯೋ, ಯಧಾತ್ಮನೋ, ದೃಢನಿಶ್ಚಯನೋ, ಪರಮಾತ್ಮನಲ್ಲಿ ಅರ್ಪಿಸಲ್ಪಟ್ಟ ಮನೋಬುದ್ಧಿಗಳುಳ್ಳವನೋ, ಪರಮಾತ್ಮನ ಭಕ್ತನೋ - ಅವನು ಪರಮಾತ್ಮನಿಗೆ ಪ್ರಿಯನು ಯಾವನಿಂದ ಜನರು ಉದ್ವೇಗವನ್ನು ಹೊಂದುವುದಿಲ್ಲವೋ, ಯಾವನು ಜನರಿಂದ ಉದ್ವೇಗವನ್ನು ಹೊಂದುವುದಿಲ್ಲವೋ, ಯಾವನು ಶುಚಿಯೋ (ಒಳಗಿನ ಮತ್ತು ಬಾಹ್ಯ ಶುಚಿಯನ್ನು ಹೊಂದಿದವನು) ಅಪೇಕ್ಷಾ ಶೂನ್ಯನೋ, ಸರ್ವಕರ್ಮಪರಿತ್ಯಾಗಿಯೋ (ಮಾನಸಿಕವಾಗಿ), ಯಾವನು ಅನಿಕೇತನೋ (ಮನೆ ಮುಂತಾದವುಗಳಲ್ಲಿ ಅನಾಸಕ್ತನೊ) ಸ್ಥಿರಮತಿಯೋ (ಆತ್ಮ ತತ್ವದ ವಿಷಯದಲ್ಲಿ ದೃಢವಾದ ಜ್ಞಾನವುಳ್ಳವನೋ), ಹರ್ಷಶೋಕಗಳನ್ನು ಸಮನಾಗಿ ಭಾವಿಸುವವನು, ಸ್ತುತಿ ನಿಂದಗಳಲ್ಲಿ ಸಮನಾಗಿರುವವನು, ಅಂತಹವನು ಪರಮಾತ್ಮನಿಗೆ ಅತ್ಯಂತ ಪ್ರಿಯನು"

ನಾರದ ಭಕ್ತಿ ಸೂತ್ರದಲ್ಲಿ ಭಕ್ತಿಯ ಬಗ್ಗೆ ಸುಂದರವಾದ ವಿವರಣೆಗಳಿವೆ

"ಸಾ ತ್ವಸ್ಮಿನ್ ಪರಮಪ್ರೇಮರೂಪಾ" ಎಂಬ ಸೂತ್ರವಿದೆ "ಭಕ್ತಿಯ ನಿಜವಾದ ಸ್ವರೂಪ, ಪರಮಾತ್ಮನಲ್ಲಿ ಅತ್ಯಂತ ಪ್ರೇಮ" ಈ ಪ್ರೇಮವು ಭಯ, ಕಾಮ, ದ್ವೇಷ ಮುಂತಾದವುಗಳಿಂದ ಭಿನ್ನವಾಗಿ, ಆ ಪರಮಾತ್ಮನ ಧ್ಯಾನವಿಲ್ಲದಿದ್ದಲ್ಲಿ ಜೀವಧಾರಣೆಯೇ ದುಸ್ಸಾಧ್ಯ ಎಂಬ ನೆಲೆಯುಂಟಾಗುವ ಸ್ಥಿತಿ ನಮ್ಮ ಎಲ್ಲಾ ಕ್ರಿಯೆಗಳು ಭಗವದಭಿಮುಖವಾಗಿ ಹರಿಯದೇಕು ಭಗವಂತನ ಪ್ರೀತ್ಯರ್ಥವಾಗಿಯೇ ನಮ್ಮ ಜೀವನ ವ್ಯಾಪಾರವೆಲ್ಲವೂ ನಡೆಯಬೇಕು ಐಹಿಕ ಜೀವನದ ಕರ್ಮಗಳು, ಅಧ್ಯಾತ್ಮ ಜೀವನದ ಚಿಂತನೆಗಳೂ ಭಗವದರ್ಪಿತವಾಗಿ, ಅವನ ಮುಖೋಲ್ಲಾಸಕ್ಕಾಗಿ ಇರಬೇಕು ಆಗ ನಾವು ಮಾಡುವ ಕರ್ಮಗಳು ಶುದ್ಧವಾಗಿ, ಶಾಸ್ತ್ರವಿಹಿತವಾಗಿದ್ದು, ಭಕ್ತಿಭಾವದಿಂದ ಕೂಡಿರುತ್ತವೆ ಶ್ರೀದೇವಿ ಭಾಗವತದಲ್ಲಿ ಭಕ್ತಿಯ ಬಗ್ಗೆ ಹೇಳುತ್ತಾ "ಒಂದು ಪಾತ್ರೆಯಿಂದ ಮತ್ತೊಂದು ಪಾತ್ರೆಗೆ ಎಣ್ಣೆಯನ್ನು ಸುರಿದಾಗ ಹೇಗೆ ಅವಿಚ್ಛಿನ್ನವಾಗಿ ಎಣ್ಣೆಯು ಸುರಿಯುವುದೋ, ಅದೇ ರೀತಿ ನಮ್ಮ ಮನಸ್ಸಿನ ಭಾವನೆಗಳು ಯಾವಾಗಲೂ ಭಗವಂತನನ್ನು ಕುರಿತದ್ದಾಗಿರಬೇಕು"ಎಂದಳು ಇದನ್ನೇ ಶ್ರೀರಾಮಾನುಜರು, ತೈಲಾಧಾರಾವಚ್ಛಿನ್ನ ಸ್ಮೃತಿ ಸಂತತಿ ರೂಪಧ್ಯಾನಂ ಎಂದು ಕರೆದಿದ್ದಾರೆ

ನಾವು ಲೌಕಿಕ ಕರ್ಮಗಳನ್ನು ನಡೆಸುತ್ತಿದ್ದರೂ ಮನಸ್ಸು ಭಗವಂತನನ್ನು ಚಿಂತಿಸುತ್ತಿರಬೇಕು ಇದು ಸುಲಭ ಸಾಧ್ಯವಲ್ಲ ಸತತ ಅಭ್ಯಾಸದಿಂದ ಮಾತ್ರ ಸಾಧ್ಯ ಭಗವಂತನಲ್ಲಿ ಭಕ್ತಿಯನ್ನು ಯಾರದೋ ಬಲವಂತಕ್ಕಾಗಿ ಮಾಡಿದಲ್ಲಿ ಅದು ನಿಜವಾದ ಭಕ್ತಿ ಎನಿಸುವುದಿಲ್ಲ ಸ್ವಪ್ರೇರಣೆಯಿಂದ, ಆತ್ಮ ಸಂತೋಷಕ್ಕಾಗಿ, ಭಗವಂತನನ್ನು ಹೊಂದಬೇಕೆಂಬ ಇಚ್ಛೆಯಿಂದ ಧ್ಯಾನಮಾಡಬೇಕು ಇತರ ಐಹಿಕ ಸುಖಗಳ ಅಪೇಕ್ಷೆಗಾಗಿ ಭಗವಂತನನ್ನು ಆಶ್ರಯಿಸು



## ಮಾರಾಟಕ್ಕೆ ಸಿದ್ಧವಾಗಿರುವ ಪುಸ್ತಕಗಳು

ಶ್ರೀ ವೆಂಕಟೇಶ ಸುಪ್ರಭಾತ
ವ್ಯಾಖ್ಯಾನಸಹಿತ ಬೆಲೆ 2-50
ಗುರು ಶ್ರೀಶ ವಿಠಲದಾಸರ ಕೃತಿಗಳು
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 6-00
ದಾಸತತ್ವಪ್ರಕಾಶಿಕೆ
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 10-00
ಸ್ತೋತ್ರಕುಸುಮ ಮಾಲಾ
ಸಂ - ಎಂ ಎಸ್ ವೆಂಕಟಾಚಲಂ 3-00
ತ್ಯಾಗರಾಜಸ್ವಾಮಿ ಕೃತಿಗಳ
ಹಲವು ಮುಖಗಳು
ಎಸ್ ಎಸ್ ಮೂರ್ತಿ ಬೆಲೆ 5-00
ಕರ್ಣಾಟಕ ಹರಿದಾಸರು
ತೆಲುಗು, ಹಿಂದಿ, ಆಂಗ್ಲ, ಕನ್ನಡ 2-25
ಶ್ರೀ ಶ್ರೀನಿವಾಸನ ಹಾಡುಗಳು
ಪ್ರಸನ್ನ ವೆಂಕಟದಾಸರು
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 7-00
ಕನಕದಾಸರು ಅವರ ಸಾಹಿತ್ಯಸಮೀಕ್ಷೆ
ಸಂ - ಕೆ ಅಪ್ಪಣ್ಣಾಚಾರ್ಯ 16-00
ಶ್ರೀದವಿಠಲದಾಸರ ಕೃತಿಗಳು
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 9-00
ಉರಗಾದ್ರಿವಾಸ ವಿಠಲದಾಸರ
ಜೀವನ ಮತ್ತು ಕೃತಿಗಳು
ಸಂ - ಕೆ ಎಂ ಕೃಷ್ಣರಾವ್ ಬೆಲೆ 15-00
ಶ್ರೀ ಗುರು ವಿಜಯ ವಿಠಲದಾಸರ ಅಷ್ಟಕ
ಬೆಲೆ 3-00
ಪುರಂದರೋಪನಿಷತ್
ಬನ್ನಂಜೆ ಗೋವಿಂದಾಚಾರ್ಯ 6-75
ನಮ್ಮ ಸಮಸ್ಯೆಗಳಿಗೆ
ಭಗವದ್ಗೀತೆಯ ಪರಿಷ್ಕಾರ
- ಡಾ|| ಎಸ್ ಬಿ ರಘುನಾಥಾಚಾರ್ಯ
7-00
ಗೀತಾಸಾರೋದ್ಧಾರ
ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು
14-00

ಅಂಚೆ ವೆಚ್ಚ ಪ್ರತ್ಯೇಕ ಸಗಟು ಖರೀದಿಗೆ ಆಕರ್ಷಕ ಕಮೀಷನ್ ಉಂಟು ವಿ ಪಿ ಪಿ ಇಲ್ಲ ಡಿ ಡಿ ಗಳನ್ನು ಮಾತ್ರ ಸ್ವೀಕರಿಸಲಾಗುವುದು ಕೂಡಲೇ ಬರೆಯಿರಿ

ಪುಸ್ತಕಮಾರಾಟ ವಿಭಾಗ,
ತಿ ತಿ ದೇ ತಿರುಪತಿ - 517 507

ವುದು, ಉತ್ತಮ ಭಕ್ತಿಯೆನಿಸುವುದಿಲ್ಲ ಇತರ ಸುಖಕ್ಕಾಗಿ ಆಶ್ರಯಿಸುವವರು ಸಹ ಭಕ್ತರೆ ಆದರೆ ಭಗವಂತನ ಭಜನ ಸುಖವೊಂದನ್ನೇ ಅಪೇಕ್ಷಿಸಿ, ಅದಕ್ಕಾಗಿ ಭಗವಂತನನ್ನು ಆಶ್ರಯಿಸುವವರು ಜ್ಞಾನಿಗಳೆಂದೆನಿಸಿ, ಪರಮೈಕಾಂತಿಗಳೆಂದು ಕರೆಯಲ್ಪಡುತ್ತಾರೆ ಗೀತೆಯ ೭ನೇ ಅಧ್ಯಾಯದಲ್ಲಿ ಈ ಬಗ್ಗೆ ಭಗವಂತನು ಸ್ಪಷ್ಟವಾಗಿ ಹೇಳಿದ್ದಾನೆ

ಶ್ರೀಮದ್ ಭಾಗವತದಲ್ಲಿ ಕಪಿಲ ಮಹರ್ಷಿಯು ತನ್ನ ತಾಯಿಯಾದ ದೇವಹೂತಿಗೆ ಭಕ್ತಿಯೋಗದ ಸ್ವರೂಪವನ್ನು ವರ್ಣಿಸುತ್ತಾ, ಒಬ್ಬ ಪರಮಭಕ್ತನ ಲಕ್ಷಣಗಳನ್ನು ಈ ರೀತಿ ತಿಳಿಸಿದ್ದಾನೆ

"ಸರ್ವೇಶ್ವರನನ್ನೇ ಸರ್ವವಿಧ ಬಂಧು ಎಂದು ಭಾವಿಸುವುದು, ಸತ್ಯಸಂಧತೆ, ಸರ್ವಭೂತಗಳಲ್ಲಿಯೂ ಸಮಬುದ್ಧಿ, ಯಾರಲ್ಲಿಯೂ ವೈರಭಾವವಿಲ್ಲದೆ ನಡೆಯುವುದು, ಮಿತವಾಗಿ ಮಾತನಾಡುವುದು, ಭಗವಂತನಲ್ಲಿ ಹೊರತು ಬೇರೊಂದರಲ್ಲಿ ದೃಷ್ಟಿ ಇರದೆ ಇರುವುದು, ಅಹಂಕಾರ, ಮಮಕಾರಗಳನ್ನು ಬಿಡುವುದು, ಭಗವಂತನ ವಿರಹ ವಿಪರ್ಯಾಸ, ತೀವ್ರವಾಗಿ ಪರಿತಪಿಸುವುದು, ವಿರೋಧಿಗಳಲ್ಲಿಯೂ ಪ್ರೇಮ, ಶುಭಾಶ್ರಯವಾದ ಪರಮಾತ್ಮನ ವಿಗ್ರಹದಲ್ಲಿ ಮನಸ್ಸನ್ನು ನೆಲೆಗೊಳಿಸುವುದು, ಭಾಗವತರ ಸೇವೆ, ಸಾಧ್ಯವಾದಾಗಲೆಲ್ಲಾ ತೀರ್ಥಯಾತ್ರೆ" ಇತ್ಯಾದಿ

ಅತ್ಯುನ್ನತ ಭಕ್ತಿಗೆ ಪ್ರಧಮ ಉದಾಹರಣೆಯಾದ ಪ್ರಹ್ಲಾದನು 'ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದ ಸೇವನಂ, ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮ ನಿವೇದನಂ' ಎಂದು ಭಕ್ತಿಯನ್ನು ನವ ವಿಧವಾಗಿ ವಿಶ್ಲೇಷಿಸಿದ್ದಾನೆ ನಮ್ಮ ಎಲ್ಲಾ ಇಂದ್ರಿಯಗಳನ್ನೂ ಭಗವಂತನ ಸೇವೆಯಲ್ಲಿ ತೊಡಗಿಸುವುದನ್ನು ಅಭ್ಯಾಸ ಮಾಡಿಕೊಳ್ಳಬೇಕು ಕುಲಶೇಖರ ಆಳ್ವಾರರು ತಮ್ಮ ಮುಕುಂದ ಮಾಲಾ ಸ್ತೋತ್ರದಲ್ಲಿ "ಜಿಹ್ವೇ ಕೀರ್ತಯ ಕೇಶವಂ ಮುರರಿಪುಂ ಚೇತೋ ಭಜ ಶ್ರೀಧರಂ ಪಾಣಿ ದ್ವಂದ್ವ ಸಮರ್ಚಯಾ ಅಚ್ಯುತ ಕಥಾ ಶ್ರೋತ್ರದ್ವಯಂ ತ್ವಂಶೃಣು ಕೃಷ್ಣಂ ಲೋಕಯ ಲೋಚನ ದ್ವಯಂ ಹರೇಃ ಗಚ್ಛಾಂಘ್ರಿ ಯುಗ್ಮಾಲಯಂ ಜಿಘ್ರ ಘ್ರಾಣ ಮುಕುಂದ ಪಾದ ತುಳಸೀ ಮೂರ್ಧನ್ನಮಾಧೋಕ್ಷಜಂ

"ನನ್ನ ನಾಲಿಗೆ, ಭಗವಂತನ ನಾಮಸ್ಮರಣೆ ಮಾಡಲಿ, ನನ್ನ ಕೈಗಳು ಅವನನ್ನು ಅರ್ಚಿಸಲಿ, ನನ್ನ ಕಿವಿಗಳು ಅವನ ಕೀರ್ತನೆಗಳನ್ನು ಕೇಳಲಿ ನನ್ನ ಕಣ್ಣುಗಳು ಸದಾ ಅವನನ್ನೇ ನೋಡುತ್ತಿರಲಿ, ನನ್ನ ಕಾಲುಗಳು ಅವನ ನಿವಾಸ ಸ್ಥಾನಕ್ಕೆ (ದೇವಸ್ಥಾನಗಳಿಗೆ) ಗಮಿಸಲಿ, ನನ್ನ ಮೂಗುಗಳು ಅವನ ಪಾದ ತುಳಸಿಯ ಪರಿಮಳವನ್ನು ಹೀರಲಿ,- ಇತ್ಯಾದಿ ಹೀಗೆ ನಮ್ಮ ಸಮಸ್ತ ಇಂದ್ರಿಯ ವ್ಯಾಪಾರಗಳೆಲ್ಲವೂ ಪರಮಾತ್ಮನನ್ನು ಉದ್ದೇಶಿಸಿ ಇರಬೇಕು ಎಂಬುದು ತಾತ್ಪರ್ಯ

ಈ ರೀತಿ ಪ್ರತಿನಿತ್ಯವೂ ನಿಗದಿತ ವೇಳೆಯಲ್ಲಿ ಭಗವಂತನ ಧ್ಯಾನ, ಪೂಜೆ, ಅರ್ಚನೆ ಮಾತ್ರ ಅಲ್ಲದೆ ಎಲ್ಲಾ ವೇಳೆಯಲ್ಲಿಯೂ ಅವನ ಸ್ಮರಣೆಯ ಅಭ್ಯಾಸ ಒದಗಿ ಬರಬೇಕು ಇದಕ್ಕಾಗಿ ನಮ್ಮ ವಿಹಿತವಾದ ದೈನಂದಿನ ಕರ್ಮಗಳನ್ನು, ನ್ಯಾಯವಾದ ಮಾರ್ಗದಲ್ಲಿ ಹಣ ಸಂಪಾದಿಸಬೇಕಾದ ಕರ್ಮಗಳನ್ನು ತ್ಯಜಿಸಬೇಕೆಂಬುದೇನಿಲ್ಲ ಎಲ್ಲಾ ಲೌಕಿಕ ಕರ್ಮಗಳನ್ನು ಭಗವದರ್ಪಿತವಾಗಿ ಮಾಡಿ, ಭಗವಂತನನ್ನು ಸೇರುವಿಕೆಯೇ ನಮ್ಮ ಜೀವನೋದ್ದೇಶವಾಗಿರಬೇಕು ಗೃಹಸ್ಥಾಶ್ರಮದಲ್ಲಿದ್ದೂ, ಸಹ ಉನ್ನತ ಸ್ಥಾನಗಳಲ್ಲಿ ಇದ್ದೂ ಸಹ, ಪರಮ ಭಾಗವತೋತ್ತಮರಾಗಿ ಇರುವ ಅನೇಕರ ನಿದರ್ಶನಗಳಿವೆ ಭಕ್ತನ ಬೇಕು ಬೇಡಗಳನ್ನು ಗಮನಿಸಿಕೊಳ್ಳುವ ಪರಮಾತ್ಮನಿರುವಾಗ, ಅದರ ಬಗ್ಗೆ ಚಿಂತನೆ ಬಿಟ್ಟು, ಕೇವಲ ಭಗವಚ್ಚಿಂತನೆಯಲ್ಲಿಯೇ ಕಾಲಕಳೆಯುವವನೇ ಅವನಿಗೆ ಅತ್ಯಂತ ಪ್ರಿಯನಾಗುತ್ತಾನೆ 'ಅನನ್ಯಾಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ" ಎಂದು ಗೀತಾ ವಾಕ್ಯವಿದೆ ಈ ಮಾನಸಿಕ ಮಟ್ಟವನ್ನು ತಲುಪಲು, ಭಗವಂತನ ಶಕ್ತಿಯಲ್ಲಿ ಆತನ ಕರುಣಾ ಸ್ವಭಾವದಲ್ಲಿ ಪೂರ್ಣ ವಿಶ್ವಾಸ ವಿರಬೇಕು ಪ್ರಪತ್ತಿ ಅಥವಾ ಶರಣಾಗತಿಯ ಒಂದು ಮುಖ್ಯ ಅಂಗ, ಪರಮಾತ್ಮನಲ್ಲಿ 'ಮಹಾವಿಶ್ವಾಸ', ಅದಿಲ್ಲದಿದ್ದಲ್ಲಿ ಭಕ್ತಿ ಫಲಿಸದು ಈ ರೀತಿಯ ವಿಶ್ವಾಸ ಇದ್ದಲ್ಲಿ ಅನ್ಯದೇವತಾ ಭಜನೆಯ ಪ್ರಸಕ್ತಿಯೇ ಉದ್ಭವಿಸುವುದಿಲ್ಲ 'ನಾನು ನಿರಂತರ ಭಗವಂತನ ಧ್ಯಾನ, ಕೈಂಕರ್ಯಗಳಲ್ಲಿ ಇರುತ್ತೇನೆ ನನ್ನ ಯೋಗಕ್ಷೇಮವನ್ನು ಪರಮಾತ್ಮನು ನೋಡಿಕೊಳ್ಳುತ್ತಾನೆ ನನಗೆ ಯಾವಾಗ, ಏನನ್ನು ನೀಡಬೇಕೆಂದು ನನಗಿಂತಲೂ ಅವನಿಗೆ ಚೆನ್ನಾಗಿ ಗೊತ್ತಿದೆ ಅವನು ನೀಡುವ ಸುಖದುಃಖಗಳೆಲ್ಲವೂ ನನ್ನ ಒಳ್ಳೆತಿಗಾಗಿಯೇ, ನನ್ನ ಆತ್ಮೋದ್ಧಾರಕ್ಕಾಗಿಯೇ ಎಂಬ ಭಾವನೆ ಇದ್ದಲ್ಲಿ, ಜೀವನದ ಯಾವ ಏರುಪೇರುಗಳಿಗೂ ವಿಚಲಿತನಾಗದೆ, ಭಗವಂತನ ಸಾಕ್ಷಾತ್ಕಾರ ಪಡೆಯಲು ಸಾಧ್ಯ

ಭಕ್ತನಾದವನು ಭಗವಂತನಲ್ಲಿ ಆತ್ಮೀಯ ಸಂಬಂಧವನ್ನು ಮಾನಸಿಕವಾಗಿ ಬೆಳೆಸಿಕೊಳ್ಳಬೇಕು ಭಗವಂತನನ್ನು ತಾಯಿ, ತಂದೆ, ಸ್ನೇಹಿತ, ಪ್ರೇಮಿ, ಗುರು ಇತ್ಯಾದಿ ಭಾವನೆಗಳಿಂದ ಪ್ರೀತಿಸಿ, ಅನುದಿನವೂ ಅವನಲ್ಲಿ ಈ ಭಾವನೆಗಳನ್ನು ವ್ಯಕ್ತಪಡಿಸುತ್ತಿರಬೇಕು ಸಂತರು, ಸಾಧಗಳೂ ಈ ರೀತಿಯಾಗಿ ತಮ್ಮ ಅನೇಕ ಸ್ತೋತ್ರಗಳಲ್ಲಿ ಶ್ರುತಪಡಿಸಿದ್ದಾರೆ. ಕೆಲವು ಉದಾಹರಣೆಗಳನ್ನು ನೀಡುವುದಾದರೆ, ವೇದಾಂತದೇಶಿಕರು 'ತ್ವಂಮಾತರಂ ಚ ಪಿತರಂ ಸಹಜ ನಿವಾಸಂ' ಎಂದಿದ್ದಾರೆ ಶ್ರೀಭಾಷ್ಯಕಾರರದ ರಾಮಾನುಜರು 'ತ್ವಮೇವ ಮಾತಾ ಚ ಪಿತಾ ತ್ವಮೇವ, ತ್ವಮೇವ ಬಂಧುಶ್ಚ ಸಖಾ ತ್ವಮೇವ ತ್ವಮೇವ ಸರ್ವಂ ಮಮ ದೇವದೇವ' ಎಂಬ ಪ್ರಸಿದ್ಧ ಶ್ಲೋಕವನ್ನು ತಮ್ಮ ಶರಣಾಗತಿ ಗದ್ಯದಲ್ಲಿ ಉಲ್ಲೇಖಿಸಿದ್ದಾರೆ ಯಾಮುನಾಚಾರ್ಯರು 'ಪಿತಾತ್ವಂ, ಮಾತಾತ್ವಂ, ದಯಿತ ತನಯತ್ವಂ, ಪ್ರಿಯಂ ಸುಹೃತ್, ತ್ವಮೇವತ್ವ ಮಿತ್ರಂ ಗತಿರಪಿ' ಎಂದು ಉದ್ಗರಿಸಿದ್ದಾರೆ

ಇವನ್ನು ದಿನಾ ಪಠಿಸಿದರೆ ಮಾತ್ರ ಸಾಲದು, ಇವು ನಮಗೆ ರಕ್ತಗತವಾಗಿ, ದೈನಂದಿನ ಜೀವನದಲ್ಲಿ ಹಾಸು ಹೊಕ್ಕಾಗಬೇಕು ಆಗಲೇ ಅತ್ಯುನ್ನತ ಭಕ್ತಿ ಹೊಂದಲು ಸಾಧ್ಯ ಶ್ರೀ ವೈಷ್ಣವ ಪಂಥದ ಪ್ರಥಮ ಪ್ರವರ್ತಕರುಗಳಾದ ಆಳ್ವಾರರುಗಳು ಭಗವಂತನ ಭಕ್ತಿಯಲ್ಲಿ ಆಳಿ ಮುಳುಗಿದವರು ಅವರುಗಳು ಭಗವಂತನ ಕುರಿತಾಗಿ ಹುಚ್ಚರಾದವರು 'ಪಿತ್ತರ್' ಎಂದು ತಮ್ಮನ್ನು ತಾವೇ ಕರೆದುಕೊಂಡಿದ್ದಾರೆ ನಾಯಕಿ ಭಾವವನ್ನು ತಾಳಿ, ಪರಮಾತ್ಮನ ವಿರಹವನ್ನು ತಡೆಯಲಾರದೆ ಶೃಂಗಾರ ಸೂಚಕವಾದ ಪಾಶುರಗಳನ್ನು ಹಾಡಿದ್ದಾರೆ ಭಗವಂತನಲ್ಲಿ ಜಗಳವಾಡಿದ್ದಾರೆ ಒಂದು ಕಡೆ ಒಬ್ಬ ಆಳ್ವಾರರು, ಇನ್ನು ಮುಂದೆ ನಾನು ನಿನ್ನನ್ನು ನೆನೆಯುವುದಿಲ್ಲ ಇದುವರೆಗೂ ಧ್ಯಾನಿಸಿದ್ದು ಸಾಕು ಎಂದು ಸಿಟ್ಟು ಮಾಡಿಕೊಂಡು ಹೇಳಿದ್ದಾರೆ, ಕರ್ನಾಟಕದ ಹರಿದಾಸರುಗಳೂ ಸಹ ಇದೇ ರೀತಿ ಭಕ್ತಿಯ ಸಾಮ್ರಾಜ್ಯದಲ್ಲಿ ಮುಳುಗಿ ಇಂತಹ ಅನೇಕ ಭಾವನೆಗಳನ್ನು ತಮ್ಮ ದೇವರ ನಾಮಗಳಲ್ಲಿ ವ್ಯಕ್ತಪಡಿಸಿದ್ದಾರೆ ಭಕ್ತಿ ಎನ್ನುವುದು ಒಂದು ಮಾನಸಿಕ ಅನುಭವ ಹೊರಗಿನ ಚಿಹ್ನೆಗಳು ಕೇವಲ ನಿಮಿತ್ತಮಾತ್ರ ಅವುಗಳಿಂದ ಅಂತರಿಕ ಭಾವಗಳು ಸ್ಫುಟವಾಗಿ ತೋರುವುದಿಲ್ಲ ಪರಮಾತ್ಮನಿಗೂ ಭಕ್ತನಿಗೂ ಇರುವ ಸಂಬಂಧವು ಅವಿನಾಭಾವವಾಗಿ ಇದ್ದು, ಅದು ಅವರಿಬ್ಬರಿಗೆ ಅನ್ವಯವಾಗುವ ವಿಷಯ ಹೊರನೋಟಕ್ಕೆ ಜಡನಂತೆ ಕಂಡರೂ ಅಂತರ್ಯದಲ್ಲಿ ಅತ್ಯಂತ ಭಕ್ತಿಯುಕ್ತನಾಗಿರಬಹುದು ಭಕ್ತನ ಮತ್ತು ಭಗವಂತನ ಸಂಬಂಧ ಯಾವ ರೀತಿಯದ್ದಾದರೂ ಆಗಿರಬಹುದು ಅತ್ಯಂತ ಭಕ್ತಿಯುಕ್ತಾನಾಂ ನೈವ ಶಾಸ್ತ್ರಂ ನ ಚ ಕ್ರಮಃ ಎಂಬುದಾಗಿ ಇದೆ ಅಂದ ಮಾತ್ರಕ್ಕೆ ಶಾಸ್ತ್ರಗಳಲ್ಲಿ ವಿಧಿಸಿರುವ ಎಲ್ಲಾ ವಿಧಿ ನಿಷೇಧಗಳನ್ನು ಅತಿಕ್ರಮಿಸಬೇಕೆಂಬುದಿಲ್ಲ ಅತ್ಯಂತ ಭಕ್ತಿಯುಕ್ತನಿಗೆ ವಿಧಿ ನಿಷೇಧಗಳೂ ಬಂಧಿಸಲಾರವು ಆದರೂ ಲೋಕ ಹಿತಕ್ಕಾಗಿ ಆತನೂ ಎಲ್ಲರಂತೆ ನಡೆಯುವುದು ವಿಹಿತವಾದದ್ದು, ಹಿತಾಯ ಲೋಕಸ್ಯ ತವ ಪ್ರಿಯಾರ್ಥಂ ಸಂಸಾರ ಯಾತ್ರಾಂ ಅನುವರ್ತಿಯಿಷ್ಯ' ಎಂಬುದು ಅವನ ನಿಲುವಾಗಿರಬೇಕು

ಭಕ್ತನಿಗೂ ಭಗವಂತನಿಗೂ ನವವಿಧ ಸಂಬಂಧವನ್ನು ಹಿರಿಯರು ಹೇಳಿದ್ದಾರೆ ಅವರಲ್ಲೆಲ್ಲಾ ಭರ್ತೃ ಭಾರ್ಯಾ ಸಂಬಂಧ ಉನ್ನತವಾದದ್ದು ಭಗವಂತನೊಬ್ಬನೇ ಪುರುಷ, ನಾವೆಲ್ಲರೂ ಅವನ ಹೆಂಡತಿಯರು ಎಂಬ ಭಾವದಿಂದ, ಪತಿವ್ರತಾಸ್ತ್ರೀಯು ಯಾವ ರೀತಿ ತ್ರಿಕರಣಪೂರ್ವಕವಾಗಿ, ಪತಿಯನ್ನು ಸೇವಿಸುವಳೋ, ಅದೇ ರೀತಿ ಭಕ್ತನೂ ಸಹ ಭಗವಂತನನ್ನು ಏಕ ನಿಷ್ಠೆಯಿಂದ ಭಜಿಸಬೇಕು ಭಕ್ತಿಯ ಉತ್ಕಟಾವಸ್ಥೆಯಲ್ಲಿ, ಭಗವಂತನಿಗೂ ಭಕ್ತನಿಗೂ ಮಾನಸಿಕ ಐಕ್ಯ ಏರ್ಪಟ್ಟು ಅದ್ವೈತ ದರ್ಶನವಾಗುತ್ತದೆ ಪ್ರಹ್ಲಾದನು ವಿಷ್ಣುಪುರಾಣದಲ್ಲಿ 'ಮತ್ತು ಸರ್ವಂ ಅಹಂ.ಸರ್ವಂ ಮಯಿ ಸರ್ವಂ ಸನಾತನಂ' ಎಂದು ಭಕ್ತನ ಭಾವವನ್ನು ನಿರೂಪಿಸಿದ್ದಾನೆ

ಜಗತ್ತಿನ ಚರಾಚರ ವಸ್ತುಗಳೆಲ್ಲವೂ ಭಗವಂತನ ಸ್ವರೂಪವೆಂದು ತಿಳಿಯುವ ಭಕ್ತನು, ಎಲ್ಲರಲ್ಲಿಯೂ ಪ್ರೇಮ ತೋರಿಸಿ ವಿಶ್ವಪ್ರೇಮಿಯಾಗುತ್ತಾನೆ ಅವನಿಗೆ ಶತ್ರುಗಳು ಯಾರು ಇರುವುದಿಲ್ಲ 'ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ತಸ್ಯಾಹಂ ಸ ಪ್ರಣಶ್ಯಾಮಿ ಸ ಚ ಮೇನ ಪ್ರಣಶ್ಯತಿ' ಎಂಬುವುದಾಗಿ ಗೀತಾವಾಕ್ಯವಿದೆ ಎಲ್ಲರಲ್ಲಿಯೂ ತನ್ನ ಇಷ್ಟದೈವವನ್ನು ಕಾಣುವುದರಿಂದ ಅವನಿಗೆ ಯಾರಲ್ಲಿಯೂ ಹಗೆ ಇರುವುದಿಲ್ಲ ಒಂದು ವೇಳೆ ಇತರರು ತನ್ನ ವಿಷಯದಲ್ಲಿ ತಪ್ಪನ್ನೆಸಗಿದರೂ, ಅವುಗಳನ್ನು ಶಾಂತವಾಗಿ ಪರಿಗ್ರಹಿಸಿ, ಅವರಿಗೆ ಒಳಿತನ್ನೇ ಕೋರುತ್ತಾನೆ ಶಾಂತ ಮನಸ್ಕತೆ, ಭಕ್ತನ ಒಂದು ಪ್ರಮುಖ ಲಕ್ಷಣ

ಭಕ್ತಿಯೋಗದಲ್ಲಿ ಭಗವಂತನ ನಿರಂತರ ಧ್ಯಾನ ಅತ್ಯವಶ್ಯಕ ಗೀತೆಯಲ್ಲಿ ಹೇಳಿರುವ ಹಾಗೆ ತಸ್ಮಾತ್ ಸರ್ವೇಷು ಕಾಲೇಷು ಮಾಮನುಸ್ಮರ ಯುದ್ಧ ಚ' ಎಂಬುದು ಅನ್ವಯವಾಗುತ್ತದೆ ಮನಸ್ಸನ್ನು ನಿರಂತರ ಧ್ಯಾನಕ್ಕೆ ಅಣಿಮಾಡಿಕೊಳ್ಳುವುದು ಒಂದು ಕಲೆ ಇದು ಸತತ ಅಭ್ಯಾಸದಿಂದ ಮಾತ್ರ ಸಾಧ್ಯ ಕರ್ಮಗಳಲ್ಲಿ ಅನ್ಯ ಮನಸ್ಕತೆವುಂಟಾಗಬಾರದು ಗೃಹಸ್ಥನಾಗಿದ್ದಾಗ್ಯೂ ಸಹ, ಗೃಹ ಕೃತ್ಯಗಳನ್ನು ಯಧಾವತ್ತಾಗಿ ಹೇಗೆ ನಡೆಸಬೇಕೋ ಹಾಗೆ ನಡೆಸಿ, ಚಿತ್ತದಲ್ಲಿ ಭಗವಂತನ ಧ್ಯಾನ ಮಾಡುತ್ತಿರಬೇಕು ಕ್ಲುಪ್ತಕಾಲಗಳಲ್ಲಿ ಮಾತ್ರವಲ್ಲದೆ, ಎಲ್ಲಾ ವೇಳೆಯಲ್ಲಿಯೂ ಭಗವದ್ವಿಷಯವಾದ ಅಧ್ಯಾಪನ, ಅಧ್ಯಯನಗಳಲ್ಲಿ ಕಾಲಯಾಪನೆ ಮಾಡುತ್ತಾ ಬಂದಲ್ಲಿ ನಿರಂತರ ಧ್ಯಾನ ಒದಗುತ್ತದೆ ನಿರಂತರ ಧ್ಯಾನದಲ್ಲಿ ವಿಚ್ಛಿತ್ತಿ ಉಂಟಾದಲ್ಲಿ, ಕಳ್ಳನು ನಮ್ಮ ಸ್ವತ್ತನ್ನು ಕದ್ದಾಗ ಕೂಗಿಕೊಳ್ಳುವ ಹಾಗೆ ವೇದನೆ ಉಂಟಾಗಬೇಕು ಆಗ ಭಕ್ತಿ ಪರಿಪಕ್ವಾವಸ್ಥೆಯನ್ನು ಮುಟ್ಟಿದ ಎಂದು ಅರ್ಥ ಇದರ ಬಗ್ಗೆ ಒಂದು ಶ್ಲೋಕವಿದೆ

“ಯನ್ಮುಹೂರ್ತಂ ಕ್ಷಣಂ ವಾಪಿ ವಾಸುದೇವೋ ನ ಚಿಂತ್ಯತೆ ಸಾಹಾನಿ ಸ್ತನ್ಮಹಚ್ಛೇದ್ರಂ ಸಾಭ್ರಾಂತಿ ಸಾ ಚ ವಿಕ್ರಿಯಾಃ”

ಭಕ್ತಿಯನ್ನು ಆಚರಿಸುವಾಗ ಲಜ್ಜೆಯಾಗಲೀ, ಭಯವಾಗಲೀ ಇರಬಾರದು ದೇವಸ್ಥಾನಗಳಲ್ಲಿಯೇ ಆಗಲಿ, ಇತರ ಪೂಜಾ ಸ್ಥಳಗಳಲ್ಲಿ, ಇತರರಿದ್ದಾರೆಂದು ನಮ್ಮ ನೈಜ ಭಕ್ತಿಯನ್ನು ಪ್ರದರ್ಶಿಸಲು ಹಿಂಜರಿಯಬಾರದು ಆದರೆ ಡಾಂಭಿಕತನ ಕೂಡದು ಭಕ್ತಿಪೂರಿತವಾಗಿ ಸಹಜವಾದ ರೀತಿಯಲ್ಲಿ ದೈವಕ್ಕೆ ನಮನಗಳನ್ನು ಸಲ್ಲಿಸುವುದು ಅತ್ಯಾವಶ್ಯಕ. ಗಟ್ಟಿಯಾಗಿ ದೇವರ ನಾಮಗಳನ್ನು ಹೇಳಲು, ಸ್ತೋತ್ರಗಳನ್ನು ಹೇಳಲು ನಾಚಿಕೆ ಪಡಬಾರದು ಇವೆಲ್ಲವೂ ಸಣ್ಣ ವಿಷಯಗಳೇ ಆದರೂ, ಭಕ್ತಿಯೋಗದಲ್ಲಿ ಮಹತ್ವದ ಪಾತ್ರವಹಿಸುತ್ತವೆ ಮಾನಸಿಕ ಧ್ಯಾನ ಸಿದ್ಧಿಸಬೇಕಾದರೆ, ಮೊದಮೊದಲು ಗಟ್ಟಿಯಾಗಿ ನಾಮ ಸಂಕೀರ್ತನೆ ಮಾಡಬೇಕು ಆದ್ದರಿಂದಲೇ ನಮ್ಮ ಸಂಸ್ಕೃತಿಯಲ್ಲಿ ಚಿಕ್ಕವಯಸ್ಸಿನಲ್ಲಿಯೇ ಸ್ತೋತ್ರಗಳ, ದೇವರ ನಾಮಗಳ ಬಾಯಿಪಾಠ ಮಾಡಿಸುವುದು ಒಂದು ಆಪೇಕ್ಷಣೀಯ ಪದ್ಧತಿ

ಈ ರೀತಿ ಭಕ್ತಿಮಾರ್ಗದಲ್ಲಿ ನಡೆಯುವವನು ಸರ್ವಮಾನ್ಯನಾಗಿ, ಪರಮಾತ್ಮನ ಪೂರ್ಣಾನುಗ್ರಹಕ್ಕೆ ಪಾತ್ರನಾಗಿ, ಇಹದಲ್ಲಿ ತೃಪ್ತಿಕರವಾದ ಜೀವನವನ್ನು ಪರದಲ್ಲಿ ಭಗವತ್‌ಸಾಯುಜ್ಯವನ್ನು ಹೊಂದುವುದರಲ್ಲಿ ಸಂದೇಹವಿಲ್ಲ

### ತಿರುಮಲೆ - ತಿರುಪತಿ ದೇವಸ್ಥಾನಗಳು, ತಿರುಪತಿ.

# ಯಾತ್ರಿಕರ ಪ್ರಯಾಣ ಸೌಲಭ್ಯ

## ಸುಪ್ರಸಿದ್ಧ ದೇವಾಲಯ ಸಂದರ್ಶನ

ತಿರುಪತಿಯ ಸಮೀಪದ ಅತಿಪ್ರಾಚೀನವಾದ, ಚಾರಿತ್ರಿಕ ಪ್ರಾಮುಖ್ಯತೆಯಿರುವ ಆಲಯಗಳನ್ನು ಅತಿ ಸುಲಭವಾಗಿ ಯಾತ್ರಿಕರು ದರ್ಶಿಸಲು ಅನುಕೂಲವಾಗುವಂತೆ ತಿ ತಿ ದೇವಸ್ಥಾನಗಳು ಈ ಸುತ್ತು ಪ್ರಯಾಣವನ್ನು ಏರ್ಪಡಿಸಿದೆ ಪ್ರತಿ ದಿನ ಪ್ರತ್ಯೇಕವಾದ ಬಸ್ಸಿನಲ್ಲಿ ತಿರುಮಲೆಯ ಕೇಂದ್ರಸ್ವಾಗತ ಕಚೇರಿಯಿಂದ ಬೆಳಗ್ಗೆ 6 ಗಂಟೆಗೆ ಹಾಗೂ ತಿರುಪತಿಯ ರೈಲ್ವೆಸ್ಟೇಷನ್ ಹಿಂಭಾಗದಿಂದ ಬೆಳಗ್ಗೆ 7 ಗಂಟೆಗೆ ಹೊರಟು ಮಧ್ಯಾಹ್ನ 1 20 ಗಂಟೆಯವರೆಗೆ ಆಲಯಗಳನ್ನು ನೋಡಿ ಬರಬಹುದು

**ಸಂದರ್ಶಿಸುವ ಆಲಯಗಳು :**

1. ಶ್ರೀ ವೇಣುಗೋಪಾಲಸ್ವಾಮಿ ಆಲಯ, ಕಾರ್ವೇಟಿನಗರ.
2. ಶ್ರೀ ವೇದನಾರಾಯಣಸ್ವಾಮಿ ಆಲಯ, ನಾಗುಲಾಪುರ
3. ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ಆಲಯ, ನಾರಾಯಣವನಂ.
4. ಶ್ರೀ ಪದ್ಮಾವತೀ ಅಮ್ಮನವರ ಆಲಯ. ತಿರುಚಾನೂರು

**ಬಸ್ ಟಿಕೆಟ್ ದರ :**

ಹಿರಿಯರಿಗೆ ರೂ 50/- (ಪ್ರತ್ಯೇಕ ದರ್ಶನದೊಡನೆ), ಕಿರಿಯರಿಗೆ ರೂ 25/-

ಈ ಬಸ್ಸಿನಲ್ಲಿ ಯಾತ್ರೆಮಾಡುವ ಭಕ್ತರಿಗೆ ಸ್ವಾಮಿಯವರ ಅನ್ನಪ್ರಸಾದಗಳನ್ನು ನೀಡಲಾಗುವುದು

## ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ ತಿ ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ ಈ ಬಸ್‌ನಲ್ಲಿ ಹೊರಟು,

**ಸಂದರ್ಶಿಸುವ ಆಲಯಗಳು :**

1. ಶ್ರೀ ಗೋವಿಂದರಾಜಸ್ವಾಮಿ ದೇವಾಲಯ
2 ಶ್ರೀ ಕೋದಂಡರಾಮಸ್ವಾಮಿ ದೇವಾಲಯ
3 ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು.
4. ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ.
5 ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸಮಂಗಾಪುರ.
6 ಹರೇರಾಮ ಹರೇಕೃಷ್ಣ ಮಂದಿರ.
7 ತೊಂಡವಾಡದ ಶ್ರೀ ಅಗಸ್ತ್ಯೇಶ್ವರಸ್ವಾಮಿ ದೇವಾಲಯ.
(ರೀಜನಲ್ ಸೈನ್ಸ್ ಸೆಂಟರ್ ಅನ್ನೂ ನೋಡಬಹುದು.)

- ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು (2 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ ಬೆಳಗ್ಗೆ 6-00, 10-00, ಸಂಜೆ 3-00

**ಬಸ್ ಟಿಕೆಟ್ ದರ :** ಹಿರಿಯರಿಗೆ ರೂ 20/-, ಕಿರಿಯರಿಗ ರೂ 10/-, (ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

## ಉಚಿತಪ್ರಯಾಣ

ತಿರುಪತಿಯಲ್ಲಿನ ರೈಲ್ವೆ ನಿಲ್ದಾಣದಿಂದ ಬಸ್ ನಿಲ್ದಾಣ, ಲೀಲಾಮಹಲ್, ಕಪಿಲತೀರ್ಥಗಳ ಹಾದಿಯಲ್ಲಿ ಅಲಿಪಿರಿಗೆ ಎಂದರೆ ಬೆಟ್ಟದ ಬುಡಕ್ಕೆ ತಿ ತಿ ದೇವಸ್ಥಾನಗಳ ಬಸ್ ಒಂದರ ಹಿಂದೆ ಒಂದರಂತೆ ನಿರಂತರವಾಗಿ ಹೊರಡುತ್ತಿರುತ್ತದೆ ಕಾಲುಹಾದಿಯಲ್ಲಿ ಬೆಟ್ಟವನ್ನು ಏರಲು ಬಯಸುವ ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬಹುದು

ತಿರುಮಲೆಯಲ್ಲಿ ಕೇಂದ್ರ ಸ್ವಾಗತ ಕಚೇರಿಯಿಂದ ಬಸ್ ನಿಲ್ದಾಣ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳು, ಕ್ಯೂಕಾಂಪ್ಲೆಕ್ಸ್ ಸಮೀಪ, ಕ್ಯಾಂಟೀನ್ ಸಮೀಪಗಳಿಗೆ ಒಂದರ ಹಿಂದೆ ಒಂದರಂತೆ ತಿ ತಿ ದೇವಸ್ಥಾನಗಳ ಬಸ್ ಹೊರಡುತ್ತಿರುತ್ತದೆ ಯಾತ್ರಿಕರು ಈ ಅವಕಾಶವನ್ನೂ ಬಳಸಿಕೊಳ್ಳಬಹುದು

# ಅಕ್ಕಮಹಾದೇವಿ - ಯೋಗಾಂಗ ತ್ರಿವಿಧಿ

ಡಾ|| ಆರ್. ರಾಮಕೃಷ್ಣ

ಅಕ್ಕಮಹಾದೇವಿ ಕನ್ನಡದ ಅನುಭಾವಿಗಳಲ್ಲಿ ತನ್ನದೇ ಆದ ವೈಶಿಷ್ಟ್ಯದಿಂದ ಬೆಳಗುತ್ತಿರುವ ನಂದಾದೀಪ ವಚನ ವಾಙ್ಮಯದಲ್ಲಿ ಅಕ್ಕನ ನುಡಿಗಳಿಗೆ ಅವಳದೇ ಆದ ತತ್ತ್ವ ತೇಜಸ್ಸುಗಳಿವೆ ತನ್ನ ಜೀವಿತ ಕಾಲದಲ್ಲಿ ಎದುರಿಸಿದ ಸತ್ವ ಪರೀಕ್ಷೆಗಳು, ನಡೆದು ಬಂದ ದಾರಿ, ಪಡೆದ ಅನುಭವಗಳು, ಅನುಭಾವದ ಸಿದ್ಧಿಗಳು ಬೆರಗುಗೊಳಿಸುವಂಥವು. ಅಕ್ಕನ ಸಮಕಾಲೀನರಾದ ಬಸವಣ್ಣನವರು ಕಾಯದ ಲಜ್ಜೆಯ ಕಲ್ಪಿತವ ಕಳೆದು, ಜೀವದ ಲಜ್ಜೆಯ ಮೋಹವನ ಳಿದು, ಮನದ ಲಜ್ಜೆಯ ನೆನಹ ಸುಟ್ಟು, ಭಾವದ ಕೂಟ ಬತ್ತಲೆಯೆಂದರಿದು ತವಕದ ಸ್ನೇಹ ವ್ಯವಹಾರಕ್ಕೆ ಮಹಾದೇವಿಯಕ್ಕನ ನಿಲವ ನೋಡಯ್ಯ ಪ್ರಭುವೆ ಎಂಬುದಾಗಿ ಅಕ್ಕನ ವ್ಯಕ್ತಿತ್ವವನ್ನು ಕುರಿತು ಬಣ್ಣಿಸಿದ್ದಾರೆ ಅಲ್ಲಮಪ್ರಭು ಕೂಡ 'ಗುಹೇಶ್ವರ ಲಿಂಗದಲ್ಲಿ ಸಂದಿಲ್ಲದಿಪ್ಪ ಮಹಾದೇವಿಯಕ್ಕನ ನಿಲವಿಂಗೆ ನಮೋ ನಮೋ ಎನುತಿದೆ ಕಾಣಾ' ಎಂದಿದ್ದಾರೆ. ಪ್ರಸಿದ್ಧ ಕವಿ ಸಿದ್ದಯ್ಯ ಪುರಾಣಿಕರು 'ಅಕ್ಕನೊಂದು ಮಹಿಳಾ ಸೃಷ್ಟಿಯ ಅದ್ಭುತ'ವೆಂದು ಹೇಳಿರುವುದರಲ್ಲಿ ಔಚಿತ್ಯವಿದೆ

ಹನ್ನೆರಡನೆಯ ಶತಮಾನದ ವಚನಕಾರರ ಪೈಕಿ ಅಕ್ಕಮಹಾದೇವಿ ಅದ್ವಿತೀಯ ವ್ಯಕ್ತಿಯೇ ಆಗಿದ್ದಾಳೆ ತುಂಬು ಹರೆಯದಲ್ಲಿ ಕೂಡಿಬಂದ ಭೋಗಭಾಗ್ಯಗಳನ್ನೂ ತಂದೆ ತಾಯಿ, ಮನೆ ಮಠಗಳನ್ನು ತ್ಯಜಿಸಿ, ಚೆನ್ನಮಲ್ಲಿಕಾರ್ಜುನನೇ ತನ್ನ ಪತಿಯೆಂದು ದೃಢವಾಗಿ ನಂಬಿ, ಅವನನ್ನು ಪಡೆಯಲು ಕಾತರದಿಂದ ನಡೆದ ಅಕ್ಕನ ಅನನ್ಯ ಶ್ರದ್ಧಾಭಕ್ತಿಗಳು ಅಸಾಧಾರಣವಾದವು. ಅಕ್ಕನ ಆಸೆ, ಆಕಾಂಕ್ಷೆ, ತ್ಯಾಗ, ಸಮರ್ಪಣ ಮನೋಭಾವ, ಯೋಗ ಸಾಧನೆಗಳು ಸುಖ ಸವಲತ್ತುಗಳ ಮೂಲಕ ಬೆಳೆದವುಗಳಲ್ಲ ತನ್ನ ನಿರಂತರ ಹೋರಾಟದ ಹಾಗೂ ಸತ್ವಪರೀಕ್ಷೆಗಳ ಮೂಲಕ ಗಳಿಸಿಕೊಂಡಂಥವು. ತಂದೆತಾಯಿಗಳಿಂದ ಪಡೆದ ಸಂಸ್ಕಾರ, ಗುರುಹಿರಿಯರಿಂದ ಪಡೆದ ಜ್ಞಾನದೀಕ್ಷೆ ಅಕ್ಕನ ಸಾಧನೆಗಿರುವ ಊರುಗೋಲುಗಳು, ಅಷ್ಟೆ, ಅಕ್ಕನ ವ್ಯಕ್ತಿತ್ವ ಅರಳಿ ನಿಂತದ್ದು, ಸಾಧನೆ ಸಿದ್ಧಿಗಳು ಅನನ್ಯವಾಗಿ ಅಭಿವೃದ್ಧಿಹೊಂದಿದ್ದು ಆಕೆಯ ವೈಯಕ್ತಿಕವಾದ ನಿರಂತರ ಹೋರಾಟದಿಂದಲೇ ಎಂಬ ವಿಚಾರ ಅಕ್ಕನ ಸಾಹಿತ್ಯವನ್ನು ಪರಿಶೀಲಿಸಿದಾಗ ತಿಳಿದುಬರುತ್ತದೆ

ಅಕ್ಕಮಹಾದೇವಿಯ 'ಯೋಗಾಂಗ ತ್ರಿವಿಧಿ' ಎಂಬುದು ಅರುವತ್ತೇಳು ತ್ರಿಪದಿ ಪದ್ಯಗಳಿಂದ ಕೂಡಿದ ಪುಟ್ಟಕಾವ್ಯ, ಪ್ರಾರಂಭದಲ್ಲಿ ಅಂಶಗಣಗಳಿಂದ ಕೂಡಿ ಮಾತ್ರಾಗಣಕ್ಕೆ ತಿರುಗಿರುವ ತ್ರಿಪದಿಯಲ್ಲಿ ರಚಿತವಾಗಿರುವಂಥದು 'ತ್ರಿವಿಧಿ' ಎನ್ನುವ ಶಬ್ದಕ್ಕೆ 'ತ್ರಿಪದಿ' ಎಂದೂ ಹೆಸರುಂಟು ಛಂದಸ್ಸಿನ ನಿಯಮಕ್ಕೆ ಬದ್ಧವಾಗಿ ರಚಿತವಾದ ತ್ರಿಪದಿಯೇ ಇಲ್ಲಿ 'ತ್ರಿವಿಧಿ' ಎನಿಸಿಕೊಂಡಿದೆ ತ್ರಿವಿಧಿ ಎನ್ನುವ ಶಬ್ದಕ್ಕೆ ಇರುವ ವಿಶೇಷವಾದ ಗಮನಾರ್ಹವಾದ ಅರ್ಥವೆಂದರೆ 'ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳ ಮೇಲೆ ಇಷ್ಟಪ್ರಾಣ ಭಾವಲಿಂಗಗಳನ್ನು ಧರಿಸಿ ತ್ರಿವಿಧ ಪೂರ್ವಕವಾಗಿ ಅಂಗಗುಣಗಳನ್ನು ಅಳಿದು ಲಿಂಗಗುಣ ತಾಳುವುದೇ' ಆಗಿದೆ

ಯೋಗ ಎಂಬ ಶಬ್ದವು 'ಯುಜ್' ಎಂಬ ಧಾತುವಿನಿಂದ ನಿಷ್ಪನ್ನಗೊಂಡಿದೆ ಒಂದಾಗು, ಕೂಡು, ಬೆರೆ ಎಂಬರ್ಥದಲ್ಲಿ ಆಧ್ಯಾತ್ಮಿಕ ಪರಿಭಾಷೆಯಲ್ಲಿ ಜೀವಾತ್ಮ ಪರಮಾತ್ಮರ ಸಂಯೋಗವನ್ನೇ 'ಯೋಗ'ವೆಂದು ಕರೆಯುತ್ತಾರೆ ಅಕ್ಕಮಹಾದೇವಿಯ ತ್ರಿವಿಧಿ ಆಕೆಯ ಯೋಗಸಾಧನೆಯ ಅಭಿವ್ಯಕ್ತಿಯೆನ್ನಬಹುದು ಅಕ್ಕನ ವೈಯಕ್ತಿಕ ಸಾಧನೆಯ ಶಿವಯೋಗದ ಅಂಗಗಳನ್ನು ಅದು ಪ್ರತಿಪಾದಿಸುತ್ತದೆ ಜೀವ ಮತ್ತು ಶಿವ - ಇವರ ಸಂಯೋಗ ಹೊಂದಿರುವಿಕೆಯೇ ಶಿವ - ಯೋಗ ಅಂಗಗುಣಗಳೆಲ್ಲ ಲಿಂಗಗುಣಗಳಾಗಿ ಮಾರ್ಪಡುವುದರಲ್ಲಿಯೇ ಈ ಯೋಗದ ಮಹತ್ವ ಅಡಗಿದೆ ಶಿವ - ಶಕ್ತಿ ಇವೆರಡನ್ನು ಒಂದುಗೂಡಿಸುವುದೇ ಈ ಶಿವಯೋಗದ ಪ್ರಮುಖಗುರಿ ಇಷ್ಟಲಿಂಗ ಧಾರಣ, ತ್ರಿವಿಧ ಪೂಜೆ ಅದರಿಂದ ಲಿಂಗಾಂಗ ಸಾಮರಸ್ಯ - ಇವೆಲ್ಲವೂ ಇಲ್ಲಿ ಮುಖ್ಯ

ಅಕ್ಕನ 'ಯೋಗಾಂಗ ತ್ರಿವಿಧಿ' ಚಿಕ್ಕದಾದರೂ ಆಕೆಯ ವ್ಯಕ್ತಿತ್ವದ ಉನ್ನತ ಉದಾತ್ತ ಅಂಶಗಳನ್ನೂ ಸಾಧನೆ ಸಿದ್ಧಿಗಳನ್ನೂ ಅನಾವರಣಗೊಳಿಸುವ ವಿಶಿಷ್ಟ ಕಾವ್ಯ ಸ್ವತಂತ್ರವಾದ ರಚನಾ ಶಿಲ್ಪದಿಂದಲೂ ತಂತ್ರ ವೈಶಿಷ್ಟ್ಯದಿಂದಲೂ ಕೂಡಿರುವ ಈ ಕೃತಿ, ಒಂದು ಖಂಡಕಾವ್ಯವೆನ್ನುವಂತಿದೆ

ದೇವತಾಸ್ತುತಿ, ಗುರುಸ್ತುತಿಗಳಿಂದ ಆರಂಭವಾಗುವ ಈ ಕಾವ್ಯ, ಒಲುಮೆಯಿಂದ ಓದಿದವರಿಗೆ ಭೋಗಭಾಗ್ಯಗಳು ಸಿದ್ಧಿಸುತ್ತವೆ ಎಂಬ ಶುಭಹಾರೈಕೆಯನ್ನು ಸೂಚಿಸುತ್ತ ಮುಕ್ತಾಯಗೊಳ್ಳುತ್ತದೆ ಇದು ಈ ಕಾವ್ಯದ ತಂತ್ರವೈಶಿಷ್ಟ್ಯ

ಯೋಗಮಾರ್ಗಕ್ಕಿಳಿದು ಪರಮಾತ್ಮನಾಗುವ ಧ್ಯಾನದ ಪದ್ಧತಿ ಈ ತ್ರಿವಿಧಿಯಲ್ಲಿ ಮೂಡಿಬಂದಿದೆ

ಜೀವ ಪರಮರ ಭೇದ<br>
ಭಾವವನು ಅರಿಯುವೊಡೆ<br>
ಆವಾವ ಮುಖದೊಳಿರುತಿಹುದೊ<br>
ಎನ್ನಯ ಭಾವಕ್ಕೆ ಬಂದುದನೊರೆವೆನು

ವಿಷಯ ಪ್ರಾರಂಭಿಸುವ ಮೊದಲು ಶ್ರೀ ಗುರುವಿಗೆ ನಮಸ್ಕರಿಸಿ ತನ್ನ ದೇವ ಚೆನ್ನಮಲ್ಲಿಕಾರ್ಜುನನನ್ನು ಮನದುಂಬಿ ಹಾಡುತ್ತಾಳೆ -

ಎಲ್ಲ ದೇವರದೇವ ವಲ್ಲಭನೆ ಗುರುಚೆನ್ನ<br>
ಮಲ್ಲಿಕಾರ್ಜುನನನೆ ಮನದೊಳಗೆ ಇರು ಕಂಡಾ<br>
ಬಲ್ಲಂತೆ ನಿನ್ನ ನುತಿಸುವೆನು

ಯೋಗದ ನಿಲುವುಗಳನ್ನು ತಿಳಿಸುವ ಮುನ್ನ-

ಮಾಘಮಾಸವು ಹೋಗೆ ಮೇಲೆ<br>
ಬಂದಿತು ಚೈತ್ರ<br>
ಬೇಗ ಮಾಮರನು ತಳಿರೇರ ಅದ ಕಂಡು<br>
ಕೂಗಿ ಕರಯಿತ್ತು ಕಳಕಂಠ

ಎಂಬುದಾಗಿ ಪ್ರಕೃತಿಯ ಬಹುಸುಂದರವಾದ ಚಿತ್ರವನ್ನು ನೀಡಿದ್ದಾಳೆ ಐಹಿಕದ ಮಾಘಮಾಸ ದಾಟುವ, ಪಾರಮಾರ್ಥಿಕ ಚೈತ್ರಮಾಸ ಕಾಲಿಡುವ

ಅನುಭಾವದ ಮಾಮರ ತಳಿರಿಡುವ, ಆತ್ಮಕ್ರೋಗಿಳೆ ಕೂಗುವ ಈ ಚಿತ್ರ ಬರಿ ಚಿತ್ರವಾಗಿರದೆ ಅನುಭಾವದ ಸನ್ನಿವೇಶವನ್ನು ಮೂರ್ತೀಕರಿಸುವ ಒಂದು ಸುಂದರ ಪ್ರತಿಮೆಯಾಗಿದೆಯೆಂದು ಹೇಳಬಹುದು

ಕರ್ತೃ ಶ್ರೀ ಗುರುರಾಯ ಮುತ್ತಿನ ಕವಚವ
ಅರ್ತಿಯಿಂದೆನಗೆ ಅಳವಡಿಸಿ ಅದರಿಂದ
ಕಿರ್ತ್ತೆನು ಮಾಯದ ಎಲೆಗಳನು

ಎಂದು ಹೇಳುವಲ್ಲಿ ಅಕ್ಕ ಶ್ರೀ ಗುರುಕಾರುಣ್ಯ ಪಡೆದ, ಲೌಕಿಕ ಮೋಹ ಪಾಶಗಳಿಂದ ದೂರವಾದ ಅವಸ್ಥೆಯನ್ನು ಚಿತ್ರಿಸುತ್ತದೆ.

ಐಹಿಕ ಭೋಗಭಾಗ್ಯಗಳ ಮನೆಯನ್ನು ತ್ಯಜಿಸಿ, ಆಧ್ಯಾತ್ಮಿಕ ಸಂಭ್ರಮದ ನಿಲುವಿನ ಮನೆಗೆ ನಡೆದ ವಿಚಾರವನ್ನು ಅಕ್ಕ ಕಾವ್ಯಮಯವಾಗಿಯೇ ಬಣ್ಣಿಸಿದ್ದಾಳೆ-

ಒಂಬತ್ತು ಚೌಕದ ಉಂಬುಡುವ ಮನೆಯನ್ನು
ನಂಬದಲೆ ಕಡೆಗೆ ತೊಲಗಿಸಿ ಮುಂದಣ
ಸಂಭ್ರಮದ ಮನೆಗೆ ನಡೆದೆನು

ಒಂಭತ್ತು ರಂಧ್ರಗಳ ಈ ನಶ್ವರ ದೇಹದಲ್ಲಿ ಆತ್ಮಜ್ಯೋತಿಯ ಮುತ್ತಿರುವುದರಿಂದ ಅದನ್ನು ಅರಿತುಕೊಳ್ಳಬೇಕಾದುದು ಜಾಣತನದ ಲಕ್ಷಣವೆಂದು ಹೇಳಿದ ಅಕ್ಕ ಆ ಕಾರ್ಯದಲ್ಲಿಯೇ ಸಂಪೂರ್ಣ ತಲ್ಲೀನಳಾಗಿರುವಳು

ಅಷ್ಟದಳ ಕಮಲದ ಬಟ್ಟಬಯಲೊಳಗೊಂದು
ಮುಟ್ಟಬಾರದ ಘನವಿಹುದು ಅದರೊಳಗೆ
ದೃಷ್ಟಿ ಇಟ್ಟವನೆ ನಿಜಮುಕ್ತ

ಶಿವಯೋಗಕ್ಕೆ ಮೂಲಾಧಾರ - ಇಷ್ಟಲಿಂಗದ ಮುಖಾಂತರ ಶಿವಯೋಗದ ಹಾದಿಯಲ್ಲಿ ಮುನ್ನಡೆದ ಅಕ್ಕ ದೃಷ್ಟಿಯೋಗಕ್ಕಿಳಿಯುತ್ತಾಳೆ ಆಕೆ ಮುಟ್ಟಬಾರದ ಘನದ ಕಡೆಗೆ ದೃಷ್ಟಿಯಿರಿಸಿ ಧ್ಯಾನ, ಧಾರಣ, ಸಮಾಧಿಗಳನ್ನು ಒಂದೊಂದಾಗಿ ಅನುಭವಿಸಿ, ನಾದವನ್ನು ಕೇಳಿ, ಜ್ಯೋತಿಯನ್ನು ನೋಡಿ ಅದನ್ನು ಬಣ್ಣಿಸುವುದು ಇಂತು

ಮೊರೆಯ ನಾದವ ಕೇಳಿ
ಉರಿವ ಜ್ಯೋತಿಯ ನೋಡಿ
ಸುರಿವ ಅಮೃತವ ದಣಿಯುಂಡ ಕಾರಣವು
ತೊರೆದೆನು ಜನನ ಮರಣಗಳ

ಈ ನುಡಿಗಳು ಅಕ್ಕನ ಯೋಗದ ಸಿದ್ಧಿಯನ್ನು ಅರುಹುತ್ತದೆ ಅಷ್ಟಾಂಗಯೋಗಕ್ಕಿಂತ ಅಷ್ಟಾವರಣ ಸಾಧನೆಯೇ ಹೆಚ್ಚು ಎಂಬುದು ಅಕ್ಕನ ನಿಲುವು

ಅಷ್ಟಾವರಣದ ಹಣ್ಣು
ಬಟ್ಟಬಯಲೊಳಗಿರಲು
ಅಷ್ಟಾಂಗಯೋಗಗಳ ಮಾಡಿ ಬಳಲುವರು
ದೃಷ್ಟಿಯಲಿರುವುದನು ಮರೆವರು

ಈ ಪರಿಯಲ್ಲಿ ಹೇಳಿಕೊಂಡಿದ್ದರೂ ಅಕ್ಕನ ಯೋಗಾನುಭವದಲ್ಲಿ ಅಷ್ಟಾಂಗಯೋಗದ ಅನುಭವ ಇಲ್ಲದಿಲ್ಲ

ಒಂಬತ್ತು ದ್ವಾರಗಳ ಇಂಬುಗಳು ಬಲಿಯುತ್ತ
ತುಂಬಿ ಸುಷುಮ್ನೆಯೊಳು ಮನವ ನೋಡಲ್ಕೆ
ಕುಂಭದೊಳಗಮೃತವ ಸುರಿವುದು

ಎನ್ನುವಲ್ಲಿ ಮತ್ತು

ಕುಂಡಲಿಯ ಸರ್ಪ ತುಂಡ ಮೇಲಿಕೆ ತೆಗಿಯೆ
ಮಂಡಲ ಮೂರು ಬೆಳಗಾಗೆ ನಡುವಳ
ಖಂಡಜ್ಯೋತಿಯಲಿ ಬಯಲಾದೆ

ಎಂದು ಹೇಳುವಲ್ಲಿ ಯೌಗಿಕ ಸಿದ್ಧಿಯ ಅನುಭವಗಳೇ ಇವೆ ಅಕ್ಕನಿಗೆ ಅಂಗದಾಶ್ರಯವಳಿದು ಲಿಂಗದಾಶ್ರಯವುಳಿದು ಬಿಡುತ್ತಿರುವುದು ಈ ಯೌಗಿಕ ಸಿದ್ಧಿಯ ಪರಿಣಾಮವೆನ್ನಬಹುದು. ಯೌಗಿಕ ಅನುಭವ ಅಥವಾ ಲಿಂಗಾನುಭವ ಅನನ್ಯವಾದುದು ಅದು ಅನ್ಯರಿಗೆ ತಿಳಿಸಲು ಸಾಧ್ಯವಾಗದಂತಹುದು ಅಕ್ಕನೇ ಒಂದೆಡೆ ಹೇಳಿದ್ದಾಳೆ.

ನಲ್ಲಳು ನಲ್ಲನ ಸುಖವ ಎಲ್ಲರಿಗೆ ಅರಹುವಳೆ
ಬಲ್ಲಡೆ ಅದರ ತೆರನಂತೆ ಲಿಂಗಸುಖ
ಬಲ್ಲವರು ಪರರಿಗುಸುರುವರೆ

ಇಷ್ಟೇ ಅಲ್ಲದೆ ಮುಂದುವರಿದು, 'ಚಿನ್ನಬಣ್ಣಗಳಂತೆ, ರತ್ನದೀಪ್ತಿಗಳಂತೆ ಭಿನ್ನವಿಲ್ಲದೆ ಬೆರೆದಿಹರು ಲಿಂಗದೊಳು ಪನ್ನಗಧರನ ಶರಣರು' ಎಂದು ಅಕ್ಕ ಹೇಳಿದ್ದಾಳೆ. ಇಷ್ಟಲಿಂಗೋಪಾಸಕರಾದ ಭಕ್ತರು ಷಟ್‌ಸ್ಥಲ ಮಾರ್ಗ ಹಿಡಿದು ಯೋಗಾಂಗದ ಸಾಧನೆಗೆ ಇಳಿದಾಗ ಲಿಂಗದಲ್ಲಿ ಭಿನ್ನವಿಲ್ಲದ ಬೆರಕೆ ಅವರದು ಅದು ಪರರಿಗೆ ತಿಳಿಸಲು ಸಾಧ್ಯವಾಗದಂಥದು ಅದನ್ನು ಅನುಭವಿಸಿಯೇ ದಿವ್ಯಾನಂದ ಪಡುವಂಥದ್ದು

ಬಲ್ಲವರೆ ಬಲ್ಲರು ಎಲ್ಲರಿಗೆ ತಿಳಿಯದು
ಕಲ್ಲೊಳಗೆ ಅನಲ ಇರುವಂತೆ ಇದರನುವ
ಬಲ್ಲವರಿಗರ್ಥ ತಿಳಿವುದು

ಲಿಂಗಾಂಗ ಸಮರಸ ವಿಚಾರವನ್ನು ಬಲ್ಲವರೇ ಮಹಾಜ್ಞಾನಿಗಳು ಅದು ಎಲ್ಲರಿಗೂ ತಿಳಿಯುವುದಿಲ್ಲ ಕಲ್ಲಿನೊಳಗೆ ಬೆಂಕಿ ಇರುವಂತೆ ಈ ರಹಸ್ಯದ ಅನುಭವವನ್ನು ಬಲ್ಲವರಿಗೆ ಈ ಕೃತಿಯ ಅನುಭವದ ಅರ್ಥವು ತಿಳಿಯುವುದು

ಶ್ರೀ ಗುರುವು ಚೆನ್ನಮಲ್ಲ
ಯೋಗಾಂಗ ತ್ರಿವಿಧಿಯನು
ಬಲ್ಲಂತೆ ಪೇಳ್ವ - ರಾಗದಿಂ ಬರೆದೋದೆ
ಭೋಗ ಭಾಗ್ಯವು ಸಿದ್ಧಿಸುಗು

ಶ್ರೀ ಚೆನ್ನಮಲ್ಲಿಕಾರ್ಜುನ ಗುರುವು ಈ ಯೋಗಾಂಗ ತ್ರಿವಿಧಿಯನು ತಾನೇ ತನಗೆ ತಿಳಿಯುವ ಹಾಗೆ ಹೇಳಿದನು ಇದನ್ನು ಬರೆದರೆ ಓದಿದರೆ ಸಕಲ ಭೋಗ ಭಾಗ್ಯವು ಸಿದ್ಧಿಸುತ್ತವೆ

ಹೀಗೆ ಅಕ್ಕ ತಾನು ಕಂಡುಂಡ ಅಧ್ಯಾತ್ಮ ವಿದ್ಯೆಯನ್ನೂ ಲಿಂಗಾಂಗ ಸಾಮರಸ್ಯದ ಪರಿಯನ್ನೂ ಈ ಯೋಗಾಂಗ ತ್ರಿವಿಧಿಯಲ್ಲಿ ಬಹು ಸಂಕ್ಷಿಪ್ತವಾಗಿ ತಿಳಿಸಿದ್ದಾಳೆ ವೀರಶೈವ ಧರ್ಮದ ಷಟ್‌ಸ್ಥಲ ಶಾಸ್ತ್ರದ ಸೂಕ್ಷ್ಮ ನಿರೂಪಣೆ ಈ ಕೃತಿಯಲ್ಲಿ ಅಡಗಿದೆ ಯೋಗಾಂಗ ತ್ರಿವಿಧಿ ಚಿಕ್ಕದಾದರೂ ಅಕ್ಕನ ಅನುಭವ ಸಂಪತ್ತಿಯನ್ನು ಸಹಜ ಸಾಹಿತ್ಯರೂಪಕ್ಕೆ ತಂದ ಚೆಲುವಾದ ಕೃತಿ ಅವಳ ತತ್ತ್ವ ಸಂಗ್ರಹ ಶಕ್ತಿ, ಗುರುಭಕ್ತಿ ಇಲ್ಲಿ ಎದ್ದುಕಾಣುತ್ತದೆ ತ್ರಿಪದಿಯ ಛಂದಸ್ಸು ಸಲೀಲವಾಗಿ ಅವಳ ನಾಲಿಗೆಯ ಮೇಲೆ ಲಾಸ್ಯವಾಡಿದೆ ಅಂಶಗಣದ ಲಕ್ಷಣವುಳ್ಳುದಾದರೂ ಮಾತ್ರಾಗಣದತ್ತ ತಿರುಗಿ ಅದು ಸಾಕಷ್ಟು ಮುಂಬಂದಿದೆ ಎಂಬುದಕ್ಕೆ 'ಯೋಗಾಂಗ ತ್ರಿವಿಧಿ' ಸಾಕ್ಷಿಯಾಗಿದೆ ಎಂದು ರಂ ಶ್ರೀ ಮುಗಳಿಯವರು ಅಭಿಪ್ರಾಯ ಪಟ್ಟಿದ್ದಾರೆ ಯೋಗಾನುಭವವೇ ಈ ಯೋಗಾಂಗ ತ್ರಿವಿಧಿಯ ಮುಖ್ಯ ವಸ್ತುವಾಗಿರುವುದರಿಂದ, ವಚನಗಳಲ್ಲಿ ಕಾಣಸಿಕೊಳ್ಳುವ ಲಾಲಿತ್ಯ ಭಾಷೆ ಅಲಂಕಾರಗಳ ಸೊಗಸು, ರಸಾರ್ದ್ರ ಭಾವಗಳನ್ನು ಓದುಗರು ಈ ಕಾವ್ಯದಲ್ಲಿ ನಿರೀಕ್ಷಿಸುವಂತಿಲ್ಲ. ಅನುಭಾವದಂಥ ವಸ್ತುವನ್ನು ಕಾವ್ಯದಲ್ಲಿ ಯಶಸ್ವಿಯಾಗಿ ಮೂಡಿಸಬಹುದು ಅದಕ್ಕೊಂದು ಸ್ವರೂಪ ಕೊಡಬಹುದು ಎಂಬುದರ ಒಂದು ಸಾಧ್ಯತೆಯನ್ನು ಇಲ್ಲಿ ಅಕ್ಕಮಹಾದೇವಿ ತೋರಿಸಿಕೊಟ್ಟಿದ್ದಾಳೆ ಅನುಭಾವ ಕಾವ್ಯ ಪರಂಪರೆಗೆ ಈ ಮೂಲಕ ಆಕೆ ತನ್ನ ಮೌಲ್ಯಯುತ ಕಾಣಿಕೆಯನ್ನು ಸಲ್ಲಿಸಿರುವುದು ಓದುಗರ ಭಾಗ್ಯ



# ಪೂರ್ಣಾವತಾರಿ ನರಸಿಂಹ

- ಪ್ರೊ. ಸು. ಗುರುರಾಜ.

ಭಕ್ತರನ್ನು ಅನುಗ್ರಹಿಸುವುದೇ ಸೃಷ್ಟಿ ಕರ್ತನಾದ ಭಗವಂತನ ಉದ್ದೇಶ  ಜಗತ್ತಿನಲ್ಲಿ ಧರ್ಮಗ್ಲಾನಿಯಾದಾಗ ಪರಮಾತ್ಮನು ಅವತರಿಸಿ ಧರ್ಮವನ್ನು ಸ್ಥಾಪಿಸಿ, ಸಜ್ಜನರನ್ನು ರಕ್ಷಿಸುತ್ತಾನೆ  ವಿವಿಧ ಭಕ್ತರೂ, ಯೋಗಿಗಳು ಉಪಾಸಕರೂ, ಭಗವದನುಗ್ರಹವನ್ನು ನಾನಾ ಬಗೆಯಿಂದ ಹೊಂದಿರುತ್ತಾರೆ ದೇವತಾವಿಗ್ರಹಗಳೂ, ಮಂತ್ರಗಳೂ ವಿವಿಧ ಆಧ್ಯಾತ್ಮಿಕ ಶಕ್ತಿಗಳ ಸಂಜ್ಞೆಗಳು.  ಮಾನವನು ಪರತತ್ವವನ್ನು ರೂಪಗುಣಗಳಿಂದ ಕೂಡಿದುದಾಗಿ ಉಪಾಸಿಸಬೇಕಾದರೆ, ವಿಗ್ರಹ, ಮಂತ್ರಗಳ ಮೂಲಕವೇ ಉದಾತ್ತ ಭಾವ ಕಲ್ಪನೆಯಿಂದಾಗಬೇಕು ಅಮೂರ್ತವಾದ ಪರತತ್ವವು ಹೇಗೆ ಸತ್ಯವೋ ಅಂತೆಯೇ ವ್ಯಕ್ತಿತ್ವವನ್ನು ಹೊಂದಿದ ಮೂರ್ತ ಸ್ವರೂಪನಾದ ಭಗವಂತನೂ ಸತ್ಯವೇ, ಈ ಪರತತ್ವವೇ ಮಾನುಷ ಲೋಕದಲ್ಲಿ ಧರ್ಮ ಸಂರಕ್ಷಣೆಗೆ ಬಂದಾಗ ಅವತಾರವೆನಿಸುತ್ತದೆ

ಪುರಾಣ ಪ್ರಸಿದ್ಧವಾದ ದಶಾವತಾರಗಳಲ್ಲಿ ಶ್ರೀ ನರಸಿಂಹ ಅವತಾರವು ನಾಲ್ಕನೆಯದು  ವೈಶಾಖ ಶುದ್ಧ ಚತುರ್ದಶಿಯಂದು ಸಮಸ್ತ ದೇವತೆಗಳ ಯಾಚನೆಯಂತೆ ದುಷ್ಟ ಹಿರಣ್ಯಕಶಿಪುವಿನ ವಿನಾಶಕ್ಕಾಗಿ ಹರಿ ಸರ್ವೋತ್ತಮನಾದ ಶ್ರೀವಿಷ್ಣುವು ತಾಳಿದ ಅವತಾರವಿದು

ಭಗವಂತನ ಅವತಾರಗಳಲ್ಲಿ ನರಸಿಂಹ ಅವತಾರ ಮಾತ್ರ ಪೂರ್ಣರೂಪದಿಂದ ಉಳಿದ ಅವತಾರಗಳಿಗಿಂತ ಬೇರೆಯಾಗಿದ್ದು ಗೂಢವು, ಪ್ರಗಲ್ಭವೂ ಆಗಿದೆ  ಬುದ್ಧಿವಾದಿಗಳು ಹೇಳುವ ದಶಾವತಾರಗಳಲ್ಲಿರುವ ಉತ್‌ಕ್ರಾಂತಿವಾದವೂ ಈ  ಅವತಾರಕ್ಕೆ ಸರಿಬೀಳುವುದಿಲ್ಲ  ಉತ್ಕ್ರಾಂತಿವಾದದಲ್ಲಿ ಪಶು ಮತ್ತು  ಮಾನವನ ಮಧ್ಯೆ ಕೊಂಡಿಯಾಗಿರುವುದು ಮಂಗ  ಆದರೆ ಈ ನಾರಸಿಂಹ ಮಂಗನಲ್ಲ, ಅರ್ಧ ಪಶು - ಅರ್ಧ ಮನುಷ್ಯ  ಇಲ್ಲಿ ಅವತಾರಗಳಲ್ಲಿರುವ ಉತ್ಕ್ರಾಂತಿವಾದವು ಬಾಲಿಶವಾಗಿ ಅರ್ಥಹೀನವಾಗಿ ಕಾಣುವುದಿಲ್ಲವೇ?

ನೃಸಿಂಹಾವತಾರದಲ್ಲಿ ಉಳಿದ ಎಲ್ಲಾ ಅವತಾರಗಳಂತೆ ದುಷ್ಟ ಶಿಕ್ಷಣ, ಶಿಷ್ಟ ಪರಿಪಾಲನಗಳ ಜೊತೆಗೆ ಭಗವಂತನು ಅಸಾಧಾರಣವಾದ ತನ್ನ ನೈಜ  ವಿಭೂತಿಯನ್ನು ಭಗವತ್ ತತ್ವವನ್ನೂ ಸ್ಪಷ್ಟವಾಗಿ ಪ್ರಕಟಪಡಿಸಿದ್ದಾನೆ  ಭಕ್ತಬಾಲಕ ಪ್ರಹ್ಲಾದನಿಗಾಗಿ ಧರಿಸಿದ ಅವತಾರದ ಕಥೆಯಲ್ಲಿ  ತಾಮಸ ರೂಪನಾದ ಅಸುರಕುಲತಿಲಕ ಹಿರಣ್ಯಕಶಿಪುವಿನ ಪುತ್ರ  ಪ್ರಹ್ಲಾದನು ದನುಜಬಾಲಕನಾಗಿದ್ದು ರಾಜಕಾರ್ಯವನ್ನು ಬಿಟ್ಟು ಹರಿನಾಮ ಸ್ಮರಣೆ ಗೈದುದು, ಅಸುರಕುಲದಲ್ಲಿ ಜನಿಸಿ ಸುರೇಶ್ವರನಾದ ವಿಷ್ಣುವಿನ  ನಾಮಸ್ಮರಣ - ಮನನ - ಚಿಂತನ ಗೈದ ಅಪರಾಧವು ದೊಡ್ಡದಾಗಿದ್ದರೂ, ಹಿರಣ್ಯಕಶಿಪುವಿಗೆ ಇದಕ್ಕಿಂತಲೂ ವಿಚಲಿತಗೊಳಿಸಿದ್ದುದು, ದಿಗ್ಭ್ರಮೆಗೊಳಿಸಿದುದು ಪ್ರಹ್ಲಾದನ ಉತ್ತರ  ಹಿರಣ್ಯಕಶಿಪು ತನ್ನ ಮಗನಾದ ಪ್ರಹ್ಲಾದನ ಬಳಿ ಮಗು ಪ್ರಹ್ಲಾದ!  ನೀನು ಕೊಂಡಾಡುತ್ತಿರುವ ನಿನ್ನ ವಿಷ್ಣು ಎಲ್ಲಿದ್ದಾನೆ? ಹೇಳು, ಅವನನ್ನು ಹುಡುಕಿ  ಕೊಂದು ಹಾಕುತ್ತೇನೆಂದು ಕೇಳಿದಾಗ, ಪ್ರಹ್ಲಾದನು ಅಪ್ಪಾ! ನಾನು ಯಾವ ಭಗವಾನ್ ವಿಷ್ಣುವಿನ ನಾಮಸ್ಮರಣೆ ಮಾಡುತ್ತಿರುವೆನೋ ಅವನು ಸರ್ವತ್ರ ಸರ್ವವ್ಯಾಪ್ತನಾಗಿದ್ದಾನೆ  ಅವನನ್ನು ಹುಡುಕುವ ಅವಶ್ಯವೇ ಇಲ್ಲ  ಅವನಿಲ್ಲದ ಸ್ಥಳವೇ ಇಲ್ಲ  ಅವನು ಸರ್ವ ಜೀವರಲ್ಲೂ  ಅಂತರ್ಯಾಮಿಯಾಗಿದ್ದು ನನ್ನಲ್ಲೂ ನಿನ್ನಲ್ಲೂ ಇದ್ದಾನೆ  ಈ ದೃಶ್ಯ ಪ್ರಪಂಚವನ್ನು ವ್ಯಾಪಿಸಿಯೂ ಮತ್ತು ಹತ್ತು ಅಂಗುಲ ಮೀರಿ ಇದ್ದಾನೆ ಅವನ  ಮುಂದೆ ಪ್ರಪಂಚದ ಮಹಾಶಕ್ತಿಗಳೆನಿಸಿದ ಬ್ರಹ್ಮ - ಸೂರ್ಯ - ಚಂದ್ರ - ಅಗ್ನಿ - ಇಂದ್ರ - ಯಮರೇ - ಮೊದಲಾದ ದಿಕ್ಪಾಲಕರು, ಸಮಸ್ತ ದೇವತೆಗಳು ನತಮಸ್ತಕರಾಗಿ ಅವನ ಅಣತಿಯಂತೆ ನಡೆಯುತ್ತಿರುತ್ತಾರೆ, ಸರ್ವಸಮರ್ಥನಾದ  ಸರ್ವೋತ್ತಮ ನಾದ, ಸರ್ವತಂತ್ರ ಸ್ವತಂತ್ರನಾದ ಶ್ರೀಮನ್ನಾರಾಯಣನೊಬ್ಬನಲ್ಲದೆ ಇತರ ದೇವತೆಗಳ ಸ್ಮರಣೆ - ಕೀರ್ತನೆ ಮಾಡುವ ಆವಶ್ಯಕತೆಯಾದರೂ ಏಕೆ?

ಹಿರಣ್ಯಕಶಿಪು ಸಾಮಾನ್ಯ ವ್ಯಕ್ತಿಯಲ್ಲ - ವೈಕುಂಠವಾಸಿಯೇ ಆಗಿದ್ದು ಶಾಪಗ್ರಸ್ತನಾಗಿ ಭೂಮಿಯಲ್ಲಿ ಹುಟ್ಟಿದವನು  ಕಠಿಣವಾದ ತಪಸ್ಸಿನಿಂದ ಬ್ರಹ್ಮದೇವರನ್ನು ಸಾಕ್ಷಾತ್ಕರಿಸಿಕೊಂಡು, ಮೂರುಲೋಕಗಳನ್ನೇ ಗೆದ್ದ  ಜಗತ್‌ವಿಜೇತ  ಜನರು ಹೇಳುವ ದೇವರು ಎಂಬುದು ಇರುವುದಾದರೆ ಅದು 'ನಾನೇ' ಅಲ್ಲದೆ ಬೇರೆ ಯಾರು ಇಲ್ಲ ಎಂಬ ದುರಾಗ್ರಹಿ ಇಂಥಹವನಿಗೆ ಮಗನ ಮಾತಿನಲ್ಲಿ ನಂಬಿಕೆ ಬರಲಿಲ್ಲ  ಅವನಿಗೆ ಬೇಕು ಪ್ರತ್ಯಕ್ಷ ಪ್ರತೀತಿ  ಮಗನಲ್ಲಿ ಕೇಳುತ್ತಾನೆ, - ನಿನ್ನ ವಿಷ್ಣುವು ಎಲ್ಲಾ ಕಡೆ ಇರುವುದಾದರೆ ಈ  ಕಂಭದಲ್ಲಿದ್ದಾನೋ?  ಆಗ ನಿರ್ಭಯನಾದ - ಶ್ರದ್ಧಾವಂತನಾದ ಪ್ರಹ್ಲಾದನು  ಕೊಟ್ಟ ಉತ್ತರವೂ ಅಷ್ಟೇ ಸ್ಪಷ್ಟ ಹಾಗೂ ನಿಸ್ಸಂದಿಗ್ಧವಾಗಿತ್ತು. - ಜನಕಾ!  ಎಲ್ಲೆಲ್ಲೂ ಇರುವವನು ಈ ಕಂಭದಲ್ಲಿ ಮಾತ್ರ ಏಕಿಲ್ಲ?  ಕಂಭದಲ್ಲಿ ಇಲ್ಲ ಎಂದರೆ ಭಗವಂತನ ಸರ್ವವ್ಯಾಪಕತ್ವಕ್ಕೆ ಅಡ್ಡಿ ಬರುವುದಿಲ್ಲವೇ? ಕಂಭದಲ್ಲೂ, ಬಿಂಬದಲ್ಲೂ ಎಲ್ಲಾ ಕಡೆಯೂ ಇದ್ದಾನೆ - ಎಂದಾಗ  ಹಿರಣ್ಯಕಶಿಪು ಕಂಭವನ್ನು - ಝಾಡಿಸಿದಾಗ ಆ ಜಡ ಕಂಭದಲ್ಲೆ ಚಿನ್ಮಯನಾದ ನರಸಿಂಹ ರೂಪದಿಂದ ಭಗವಂತನು ಪ್ರಕಟಗೊಂಡು ದೈತ್ಯನಾದ ಹಿರಣ್ಯಕಶಿಪುವನ್ನು ಸಂಹಾರಗೈಯುತ್ತಾನೆ.



ಇದರ ಹಿನ್ನೆಲೆಯಲ್ಲಿ ಚಿಕಿತ್ಸಕರಿಗೆ ಅನೇಕ ಪ್ರಶ್ನೆಗಳು ಉದ್ಭವಿಸುವುದು ಸಹಜ ಆದರೆ ಚಿಕಿತ್ಸಕರ ಎಲ್ಲಾ ಪ್ರಶ್ನೆಗಳಿಗೂ ಪುರಾಣಾಂತರಗಳಲ್ಲಿ ಉತ್ತರಗಳನ್ನು ಋಷಿಗಳು ಮೊದಲೇ ಕೊಟ್ಟಿರುತ್ತಾರೆ

ನೃಸಿಂಹಾವತಾರವಾದುದು ಸಂಧ್ಯಾಕಾಲದಲ್ಲಿ ಈ ಸಂಧ್ಯಾಕಾಲವೇ ಏಕೆ? ಈ ನರಸಿಂಹ ರೂಪವೇ ಏಕೆ? ಮತ್ಸ್ಯ ಕೂರ್ಮ ವರಾಹಗಳಂತೆ ಬೇರೆ ಪ್ರಾಣಿಯೋ, ಮನುಷ್ಯನೋ ಆಗ ಬಹುದಿತ್ತಲ್ಲಾ! ದೇವರು ಕಂಭದಿಂದಲೇ ಏಕೆ ಪ್ರಕಟಗೊಂಡ ? ಹಿರಣ್ಯಕಶಿಪು ಗದೆಯನ್ನು ಹಿಡಿದು ನರಸಿಂಹನ ಬಳಿ ಯುದ್ಧಕ್ಕೆ ಹೋದಾಗ ಅವನನ್ನು ತನ್ನ ಉಗುರುಗಳಿಂದಲೇ ಏಕೆ ಕೊಂದ? ಅವನ ಬಳಿ ಶಸ್ತ್ರಾಸ್ತ್ರಗಳು ಇರಲಿಲ್ಲವೇ? ಹೊಸ್ತಿಲಿನಲ್ಲಿ ಕೂಡುವುದು ಅನಿಷ್ಟವೆಂದ ಮೇಲೆ ನೃಸಿಂಹ ಹೊಸ್ತಿಲಿನಲ್ಲೇ ಕುಳಿತು ದೈತ್ಯನ ಉದರ ಬಗೆದನೇಕೆ?

ಇವೆಲ್ಲಾ ಪ್ರಶ್ನೆಗಳ ಉತ್ತರಗಳೂ ಹಿರಣ್ಯಕಶಿಪು ಬ್ರಹ್ಮನ ಬಳಿ ಕೇಳಿದ ವರದಲ್ಲೇ ಅಡಕವಾಗಿದೆ ಬ್ರಹ್ಮದೇವಾ! ನನಗೆ ಕೆಳಗಾಗಲಿ, ಮೇಲಾಗಲೀ ಸಾವು ಬರಬಾರದು ಹಗಲಾಗಲೀ ರಾತ್ರಿಯಾಗಲೀ ನಾನು ಸಾಯಬಾರದು ಮನುಷ್ಯರಿಂದಾಗಲೀ ಪಶುಗಳಿಂದಾಗಲಿ ಮೃತ್ಯು ಬರಬಾರದು ಅಸ್ತ್ರದಿಂದಾಗಲೀ - ಶಸ್ತ್ರದಿಂದಾಗಲಿ ನಾನು ಅಜೇಯನಾಗಿರಬೇಕು ಒಳಗಾಗಲಿ - ಹೊರಗಾಗಲಿ ಸಾವು ಬರಕೂಡದು ಹೆಚ್ಚೇಕೆ ಬ್ರಹ್ಮಾ! ನೀನು ಸೃಜಿಸಿದ ಯಾವುದರಿಂದಲೂ ನನಗೆ ಮರಣಬರಬಾರದು ಹೀಗೆ ಈ ವರದಿಂದಾಗಿ ಭಗವಂತನು ಮನುಷ್ಯ ಅಲ್ಲ - ಪಶುವೂ ಅಲ್ಲದ ನರಸಿಂಹನಾದ ಕೆಳಗೂ ಅಲ್ಲ ಮೇಲೂ ಅಲ್ಲದೆ, ತೊಡೆಯಮೇಲೆ, ಒಳಗೂ ಅಲ್ಲ - ಹೊರಗೂ ಅಲ್ಲದ ಹೊಸ್ತಿಲಿನಲ್ಲಿ, ರಾತ್ರಿಯೂ ಅಲ್ಲ - ಹಗಲೂ ಅಲ್ಲ ಸಂಧ್ಯಾಕಾಲದಲ್ಲಿ, ಶಸ್ತ್ರವೂ ಅಲ್ಲ - ಅಸ್ತ್ರವೂ ಅಲ್ಲದ ನಖ (ಉಗುರು) ಗಳಿಂದ, ಬ್ರಹ್ಮನನ್ನೇ ಸೃಷ್ಟಿಸಿದ ಭಗವಂತನು ಸ್ವಯಿಚ್ಛೆಯಿಂದ ಆವಿರ್ಭವಿಸಿ ಹಿರಣ್ಯಕಶಿಪುವನ್ನು ಸಂಹರಿಸುತ್ತಾನೆ

ಸಂಧ್ಯಾಕಾಲವೇ ಏಕೆ? ಕಂಭದಿಂದಲೇ ಏಕೆ ಬಂದ ? ಇದರ ಬಗ್ಗೆ ತಾರ್ಕಿಕವಾಗಿ ವಿವೇಚಿಸಿದರೂ ಸಂಧ್ಯಾಕಾಲವೇ ಸರಿಯೆನಿಸುವುದು ರಾಜಕಾರ್ಯದಲ್ಲಿ ವ್ಯಸ್ತನಾದ ಹಿರಣ್ಯಕಶಿಪುವಿಗೆ ಮಗನ ಭೇಟಿಗೆ ಸಮಯ ಸಿಕ್ಕಿದುದ್ದೇ ಸಂಧ್ಯಾಕಾಲದಲ್ಲೇ ಆ ರಾಜ ಸಭೆಯಲ್ಲಿ ಇದಿರಿಗಿದ್ದುದ್ದು ಕಂಭಗಳೇ ಬೇರೇನೂ ಇರಲಿಲ್ಲ ಇದೇ ಘಟನೆ ಮಧ್ಯಾಹ್ನ ಕಾಲದಲ್ಲಿ ಕಾಡಿನಲ್ಲಾಗಿರುತ್ತಿದ್ದರೆ ಆಗಲೇ ಇದಿರಿಗಿರುವ ಮರದಿಂದಲೇ ಪ್ರಕಟಗೊಳ್ಳುತ್ತಿದ್ದ ಅವನಿಗೆ ಪ್ರಕಟವಾಗಲು ಕಂಭವೇ ಬೇಕೆಂಬುದಿಲ್ಲ ಅಣು ರೇಣು ತೃಣಕಾಷ್ಠಗಳೆಲ್ಲದರಲ್ಲಿ ತುಂಬಿದ ಅವನಿಗೆ ಇಂಥದೇ ಮಾಧ್ಯಮ ಆಗದೇಕು ಎಂದಿಲ್ಲವಲ್ಲ! ಈ ಘಟನೆ ಸಂಧ್ಯಾಕಾಲದಲ್ಲಿ ನಡೆದುದೇ ಸಯುಕ್ತಿಕವಾಗಿದೆ ಲೌಕಿಕವಾಗಿ ನೋಡಿದರೂ ಅಸುರ ಶಿಲ್ಪಿ ಮಯನಿಂದ ನಿರ್ಮಿಸಲ್ಪಟ್ಟ ಆ ಭವ್ಯ ರಾಜಸಭಾಭವನದಲ್ಲಿರುವ ಎಲ್ಲಾ ಸ್ತಂಭಗಳಲ್ಲೂ ಸಿಂಹಗಳನ್ನೇ ಕೆತ್ತಿದ್ದರು ದಕ್ಷಿಣ ಭಾರತದ ಶಿಲ್ಪಗಳಲ್ಲಿ ಇಂತಹ ಸ್ತಂಭಗಳು ಈಗಲೂ ಕಾಣಸಿಗುತ್ತದೆ ಆ ಸ್ತಂಭದಲ್ಲಿದ್ದ ಸಿಂಹವೇ ನರಸಿಂಹನಾಗಿ ಪ್ರಕಟಗೊಂಡುದು ಸಮಂಜಸವೇ ಆಗಿದೆ

ಇನ್ನು ನರ - ಸಿಂಹನಾಗಿಯೇ ಏಕೆ ಬಂದ? ಅರ್ಧ ನರ - ಅರ್ಧ ಕುದುರೆಯೋ, ಆನೆಯೋ ಏಕಾಗಬಾರದಿತ್ತು ? ಇಲ್ಲಿ ಸಿಂಹವು ಸಾಕ್ಷಾತ್ ಪರಾಕ್ರಮ, ತೇಜದ ಸಾಕಾರರೂಪ ಎಲ್ಲೆಲ್ಲಿ ಭವ್ಯತೆ - ದಿವ್ಯತೆ - ಔನ್ನತ್ಯವಿದೆಯೋ ಅಲ್ಲೆಲ್ಲಾ ನನ್ನ ಅಸ್ತಿತ್ವವೇ ಆಗಿದೆ ಎಂದು ಭಗವದ್ಗೀತೆಯ ವಿಭೂತಿಯೋಗದಲ್ಲಿ ಶ್ರೀಕೃಷ್ಣನೇ ಹೇಳಿಕೊಂಡಿದ್ದಾನೆ (ನಂತರದ ಅವತಾರದಲ್ಲಿ)

ಇಷ್ಟೇ ಅಲ್ಲದೇ ಅದೇ ವಿಭೂತಿಯೋಗದಲ್ಲಿ ತನ್ನ ವಿಭೂತಿಗಳನ್ನು ಹೇಳುವಾಗ "ಮೃಗಾಣಾಂ ಚ ಮೃಗೇಂದ್ರೋಽಹಂ" ಮೃಗಗಳಲ್ಲಿ ನಾನು ಸಿಂಹ ಎಂದೇ ಹೇಳಿಕೊಂಡಿದ್ದಾನೆ

ಹೀಗೆ ಯಾವ ವಿಧದಿಂದ ನೋಡಿದರೂ ನರಸಿಂಹಾವತಾರದಲ್ಲಿ ವಿಲಕ್ಷಣತೆ ತುಂಬಿದೆ, ಭಗವಂತನನ್ನು ಸರ್ವ ವ್ಯಾಪ್ತಾ - ಸರ್ವತಂತ್ರ ಸ್ವತಂತ್ರ ಎಂದು ಹೇಳುತ್ತಾರೆ ಈ ಎರಡರ ಪ್ರತ್ಯಕ್ಷ ಪ್ರತೀತಿ ಈ ಅವತಾರದಲ್ಲಿ ಕಂಡುಬರುತ್ತದೆ ಸರ್ವವ್ಯಾಪಕತ್ವವನ್ನು ತೋರಿಸಲು ಕಂಭದಿಂದ ಪ್ರಕಟಗೊಳ್ಳುವ ಮೊದಲು ಸುತ್ತಲೂ ಎಲ್ಲಾ ಕಡೆಯಿಂದಲೂ ಭೀಕರ ಧ್ವನಿಯ ಮೂಲಕ ತನ್ನ ಇರವನ್ನು ತೋರಿಸಿಕೊಟ್ಟು ಬಳಿಕ ಸಾಕಾರ ರೂಪದಿಂದ ಆವಿರ್ಭವಿಸಿದ, ಸರ್ವತಂತ್ರ ಸ್ವಾತಂತ್ರವನ್ನು, ಹಿರಣ್ಯಕಶಿಪು ಎಷ್ಟೇ ಬುದ್ಧಿವಂತಿಕೆಯಿಂದ ಮರಣಬಾರದ ತೆರವರ ಪಡೆದಿದ್ದರೂ ಅದೆಲ್ಲವನ್ನು ವ್ಯರ್ಥಮಾಡಲು ಪರಮಾತ್ಮನು ಗೈದ 'ತಂತ್ರ' ಎಂಥಹ ಅದ್ಭುತವಾದುದು ದೇವರ ಬಳಿ ನಮ್ಮಗಳ ಯಾವ ಬುದ್ಧಿವಂತಿಕೆಯೂ ನಡೆಯಲಾರದು ಆ ಬುದ್ಧಿಯನ್ನು ಕೊಡುವವನೇ ಭಗವಂತನು ಅದಕ್ಕಾಗಿಯೇ ಅವನಿಗೆ ಸರ್ವತಂತ್ರ ಸ್ವತಂತ್ರ ಎಂದು ಹೇಳುವುದು

## ನೃಸಿಂಹೋಪಾಸನೆ :

ಶಾಸ್ತ್ರಗ್ರಂಥಗಳಲ್ಲಿ ಇಹಪರಗಳ ಶ್ರೇಯಸ್ಸಿಗೆ ಸಾಧಕವಾದ ಅನೇಕ ಉಪಾಸನೆಗಳನ್ನು ವಿಧಿಸಿದ್ದಾರೆ ಮುಮುಕ್ಷುಗಳಿಗೆ ಮೋಕ್ಷದ ಹಾದಿ ಸೂಚಿಸ ಬಲ್ಲ ಇಂತಹ ಉಪಾಸನೆಗಳಲ್ಲಿ ಶ್ರೀ ನೃಸಿಂಹೋಪಾಸನೆ ತುಂಬ ಮಹತ್ವದ್ದು ನೃಸಿಂಹ ಪೂರ್ವತಾಪಿನೀ-ಉಪನಿಷತ್ತಿನಲ್ಲಿ (೫-೮) ಆಶ್ರಮಗಳಲ್ಲಿ ಸನ್ಯಾಸಾಶ್ರಮವೂ ಹಿರಿದೆಂದರು ರುದ್ರಾಧ್ಯಯನವನ್ನು ಜಪಿಸುವವನು ಯಾವುದೇ ಆಶ್ರಮದಲ್ಲಿರಲಿ - ನೂರು ಸನ್ಯಾಸಿಗಳಿಗೆ ಸಮನೆಂದು, ನೃಸಿಂಹನ ಉಪಾಸನೆ ಮಾಡುವವನು ಅಂತಹ ಹತ್ತು ಸಹಸ್ರ ಸಾಧಕರಿಗೆ ಸರಿಯೆಂದೂ ಅರ್ಘ ಕೊಡುವ ವಾಕ್ಯ ಒಂದಿದೆ

"ನೃಸಿಂಹ" ದೇವತೆ ಸಾತ್ವಿಕತೆ, ಪವಿತ್ರತೆಗಳ ಜಾಗೃತ ಪ್ರತೀಕ ಸಾಧು ಪರಿತ್ರಾಣದ ಪ್ರಭಾವಿಸಂಕೇತ ಸಹಸ್ರ ಸೂರ್ಯರಂತೆ, ಪ್ರಳಯಕಾಲದ ಘೋರ್ಗರೆಯುವ ಸಮುದ್ರದಂತೆ ಕೋಪಾನಲದಿಂದ ಆವಿರ್ಭವಿಸಿದ ನರಸಿಂಹನು ದೈತ್ಯವರ್ಗದ ಅಹಂಕಾರ ನಾಶ, ಮಹಾಸ್ತಂಭಭೇದ, ಮಹಾದೈತ್ಯ ಹಿರಣ್ಯಕಶಿಪುವಿನ ವಕ್ಷಸ್ಥಳಭೇದ ಇವುಗಳನ್ನು ಏಕಕಾಲದಲ್ಲಿ ಮಾಡಿ ಮರುಕ್ಷಣವೇ ಕ್ರೋಧ ರಹಿತನಾಗಿ ಭಕ್ತ ಪ್ರಹ್ಲಾದನಿಗೆ ಪ್ರಸನ್ನನಾಗಿ ಅಭಯವಿತ್ತಂತೆ ಈ ಪ್ರಭಾವೀ ದೇವತೆಯ ಆರಾಧಕರಿಗೂ ತದ್ರೀತಿ ಶೀಘ್ರವಾಗಿ ಅನುಗ್ರಹಿಸುವುದರಲ್ಲಿ ಸಂದೇಹವಿಲ್ಲ

ಮಧ್ವಾಚಾರ್ಯರ ಶಿಷ್ಯರಾದ ತ್ರಿವಿಕ್ರಮ ಪಂಡಿತಾಚಾರ್ಯರ ತನುಜ ನಾರಾಯಣ ಪಂಡಿತರು ವೇದಶಾಸ್ತ್ರ ಪಾರಂಗತರಾದ ದ್ವೈತ ಮತಾವಲಂಬಿಯಾದ ಈ ಮಹನೀಯರು ದ್ವೈತಮತ ಪ್ರಚಾರಕಾರ್ಯದಲ್ಲಿ ಕೇರಳ ದೇಶದ ದ್ವೈತೇತರ ಮತಗಳ ವಿದ್ವಾಂಸರನ್ನು ವಾದದಲ್ಲಿ ಜಯಿಸಿದುದರ ಪರಿಣಾಮಾಗಿ ಪರಾಜಿತರಾದ ಕೇರಳೀಯ ವಿದ್ವಾಂಸ ಮತ್ಸರದಿಂದ ಕೃತಿಮ ಮಾಟ ಇತ್ಯಾದಿ ಅಭಿಚಾರ ಮಾರ್ಗದಿಂದ ನಾರಾಯಣ ಪಂಡಿತರನ್ನು ಕೊಲ್ಲಲು ಹವಣಿಸಿದಾಗ, ಅಭಿಚಾರ ಪ್ರಯೋಗ ಮಾಯೆಯಿಂದ ಭೀತರಾದ ನಾರಾಯಣ ಪಂಡಿತರು ನರಸಿಂಹ ಸ್ತುತಿರಚಿಸಿ ಪಠಿಸಿದಾಗ ಮಾಯೆಯೂ ಅದೃಶ್ಯವಾಗಿ ಅವರು ಮುಕ್ತರಾದರೆಂದು ಇತಿಹಾಸವಿದೆ

"ನರಸಿಂಹ ಅವತಾರವು ಯಾವ ಮಾತಾಪಿತೃಗಳ ಅವಶ್ಯಕತೆ ಇಲ್ಲದೇ ಸ್ವಯಂ ಪ್ರಕಟವಾದ ಪೂರ್ಣಾವತಾರ"

# ಶ್ರೀ ಹಯಗ್ರೀವ ಅವತಾರ

- ಕಸ್ತೂರಿ ರಂಗರಾಜನ್.

ಯದಾಯದಾಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ
ತದಾತ್ಮಾನಂ ಸೃಜಾಮ್ಯಹಮ್
ಪರಿತ್ರಾಣಾಯ ಸಾಧೂನಾಂ
ವಿನಾಶಾಯ ಚ ದುಷ್ಕೃತಾಮ್
ಧರ್ಮಸಂಸ್ಥಾಪನಾರ್ಥಾಯ
ಸಂಭವಾಮಿ ಯುಗೇ ಯುಗೇ

ಧರ್ಮಕ್ಕೆ ಹಾನಿಯುಂಟಾದಾಗ, ಧರ್ಮದ ರಕ್ಷಣೆಗಾಗಿ, ದುಷ್ಟಶಿಕ್ಷಣ ಶಿಷ್ಟಪರಿಪಾಲನಕ್ಕಾಗಿ, ಲೋಕ ಕಲ್ಯಾಣಾರ್ಥವಾಗಿ ಆಗಾಗ್ಗೆ ಭಗವಂತನು ಹಲವಾರು ಅವತಾರಗಳನ್ನು ಪಡೆದಿರುವನು ಅವೆಲ್ಲವೂ ಅವನ ಸಂಕಲ್ಪಮಾತ್ರದಿಂದ ಏರ್ಪಟ್ಟವೇ ಆಗುವುವು ಅವತಾರಗಳಲ್ಲಿ ದಶಾವತಾರಗಳೆಂದು ಹತ್ತು ಅವತಾರಗಳು ಪ್ರಸಿದ್ಧವಾದವು. ಇದಲ್ಲದೇ ಹಯಗ್ರೀವ, ದತ್ತಾತ್ರೇಯ, ಕಾರ್ತವೀರ್ಯ ಮುಂತಾದ ಭಗವದಂಶ ಅವತಾರಗಳೂ ನಡೆದಿವೆ ಈ ಅಂಶ ಅವತಾರಗಳಲ್ಲಿ ಹಯಗ್ರೀವಾವತಾರವು ತನ್ನದೇ ಆದ ವೈಶಿಷ್ಟ್ಯವನ್ನು ಪಡೆದಿದೆ

ನಿರ್ಣಯ ಸಿಂಧುವಿನಲ್ಲಿ ಶ್ರಾವಣಮಾಸದಲ್ಲಿ ಮಾಡಬೇಕಾದ ಕರ್ಮಗಳನ್ನು ವಿವರಿಸುವಾಗ-

ಶ್ರಾವಣ್ಯಾಂ ಶ್ರವಣೇ ಜಾತಃ
ಪೂರ್ವಂ ಹಯಶಿರಾ ಹರಿಃ
ಜಗದಾ ಸಾಮವೇದಂ ತು
ಸರ್ವಕಲ್ಮಷನಾಶನಮ್
ಸ್ನಾತ್ವಾ ಸಂಪೂಜಯೇನ
ಶಂಖ ಚಕ್ರ ಗದಾದರಮ್

ಶ್ರಾವಣಮಾಸದ ಶ್ರವಣ ನಕ್ಷತ್ರದಲ್ಲಿ ಭಗವಂತನು ಹಯಗ್ರೀವನಾಗಿ (ಕುದುರೆ ಮುಖರೂಪಿಯಾಗಿ) ಅವತರಿಸಿ ಸಮಸ್ತವಾದ ಪಾಪಗಳನ್ನು ಹೋಗಲಾಡಿಸುವಂತಹ ಸಾಮವೇದವನ್ನು ಉಪದೇಶಿಸಿದನು ಆದ್ದರಿಂದ ಸ್ನಾನಾದಿ ನಿತ್ಯಕರ್ಮಾನುಷ್ಠಾನವನ್ನು ಮಾಡಿಕೊಂಡು ಶಂಖ ಚಕ್ರ ಗದಾಪಾಣಿಯಾದ ಆ ಮೂರ್ತಿಯನ್ನು ಆರಾಧಿಸಬೇಕು ಎಂದು ವಿವರಿಸಿದೆ

ವೇದದಲ್ಲಿಯೂ "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಣೇತಿಹಿ ತಸ್ಮೈ" - ಭಗವಂತನು ಪ್ರಪ್ರಥಮವಾಗಿ ಬ್ರಹ್ಮನನ್ನು ಸೃಷ್ಟಿಸುವನು ಅವನಿಗೆ ವೇದಗಳೆಲ್ಲವನ್ನೂ ಉಪದೇಶಿಸುವನು ಇದರಂತೆಯೇ ಕಲ್ಪಗಳಲ್ಲಿ ಕ್ರಮ ಕ್ರಮವಾಗಿ ನಡೆಯುವುದು ಎಂದು ಹೇಳಲ್ಪಟ್ಟಿದೆ

ಮಹಾಭಾರತದ ಶಾಂತಿಪರ್ವದಲ್ಲಿ ಈ ಅವತಾರ ವಿಷಯ ಅನ್ಯತಮವಾಗಿ ವಿವರಿಸಲ್ಪಟ್ಟಿದೆ ಪ್ರಳಯಾರ್ಣವದಲ್ಲಿ ಅನಿರುದ್ಧರೂಪಿಯಾದ ಭಗವಂತನು ಶಯನಿಸಿಕೊಂಡಿದ್ದನು ಲೋಕವನ್ನು ಸೃಷ್ಟಿಸಬೇಕೆಂದು ಸಂಕಲ್ಪಿಸಿದ ಆ ಪರಮನ ನಾಭಿಕಮಲದಿಂದ ಬ್ರಹ್ಮನು ತೋರಿದನು ಭಗವಂತನಿಂದ ಲೋಕವನ್ನು ಸೃಷ್ಟಿಸುವಂತೆ ಆಜ್ಞಾಪಿತನಾಗಿ, ಅವನಲ್ಲಿ ವೇದೋಪದೇಶವನ್ನು ಪಡೆದು ಅನ್ಯಾದೃಶವಾದ ಹಿರಿಮೆಯಿಂದ ಬೆಳಗಿದನು ಬ್ರಹ್ಮನು ಹಿಂದಿನ ಕಲ್ಪದಲ್ಲಿ ಲೋಕಗಳು ಯಾವ ಯಾವ ರೀತಿಯಲ್ಲಿ ಇದ್ದವು ಎಂಬುದನ್ನು ವೇದಗಳ ಮೂಲಕ ತಿಳಿದುಕೊಂಡು ಅದನ್ನು ಸ್ಮರಿಸಿಕೊಂಡೇ ಸೃಷ್ಟಿಕಾರ್ಯದಲ್ಲಿ ಮುಂದಾದನು ತನ್ನ ಸ್ವಸಾಮರ್ಥ್ಯರಿಂದ ನಾಲ್ಕು ವೇದಗಳನ್ನೂ ನಾಲ್ಕು ಪುರುಷರೂಪವಾಗಿ (ಶಿಶುವಾಗಿ) ಮಾಡಿ ಅವನ್ನು ಮುಂದಿಟ್ಟುಕೊಂಡು ಸೃಷ್ಟಿಯಲ್ಲಿ ಮಗ್ನನಾಗಿ ಮುಂದುವರಿಸಿಕೊಂಡಿದ್ದವೇಳೆಯಲ್ಲಿ ಬ್ರಹ್ಮನ ಹಿಂದಿನ ಪಾಪಶೇಷಗಳಿಗೆ ಫಲವನ್ನು ಕೊಡಲು ಸಂಕಲ್ಪಿಸಿದ ಭಗವಂತನ ಇಚ್ಛೆಯಂತೆ ಸಮುದ್ರದಲ್ಲಿ ಅತ್ಯಂತ ಘೋರವಾದ, ಅದ್ಭುತವಾದ ಹಾಗೂ ಭಯಂಕರವಾದ ಕಾರ್ಮೋಡಗಳಂತಹ ಎರಡು ಅಲೆಗಳು ಮೇಲೆದ್ದು, ಅವುಗಳಿಂದ ರಜೋಗುಣ, ತಮೋಗುಣ ಪ್ರತಿರೂಪವಾದ, ಮಹಾಬಲಿಷ್ಠರುಗಳಾದ ಮಧು ಮತ್ತು ಕೈಟಭ ಎಂಬ ಎರಡು ರಾಕ್ಷಸರುಗಳು ಉದ್ಭವರಾದರು ಅವರು ಪುರುಷ ರೂಪದಲ್ಲಿದ್ದ ವೇದಗಳನ್ನು ನೋಡಿ, ಬ್ರಹ್ಮನು ನೋಡುತ್ತಿದ್ದಂತೆಯೇ ಆ ಶಿಶುಗಳನ್ನು ಅಪಹರಿಸಿಕೊಂಡು ಹೋಗಿ ಪಾತಾಳಲೋಕದಲ್ಲಿ ಒಂದು ಗುಪ್ತವಾದ ಸ್ಥಳದಲ್ಲಿ ಮರೆಸಿಟ್ಟರು ಇದರಿಂದ ಲೆಕ್ಕಪತ್ರಗಳನ್ನು ಕಳೆದುಕೊಂಡ ಲೆಕ್ಕಿಗನಂತೆ ಏನೂ ತೋಚದೇ ಪರಿತಪಿಸಿದ ಬ್ರಹ್ಮನು ಬಹಳ ಕ್ಲೇಶಪಟ್ಟವನಾಗಿ - ಹೇ! ಏನುಮಾಡಲಿ? ವೇದಗಳು ತಾನೇ ನನ್ನ ಕಣ್ಣುಗಳು, ಧನ ಸಂಪತ್ತು ಮತ್ತು ಸಕಲವೂ ವೇದಗಳು ಅಪಹರಿಸಲ್ಪಟ್ಟಿರುವುದರಿಂದ ಕಣ್ಣಿಲ್ಲದ ಕುರುಡನಂತಾಗಿದೆಯಲ್ಲಾ ನನ್ನ ಸ್ಥಿತಿ? ನಾನು ಪ್ರಾರಂಭಿಸಿದ ಕಾರ್ಯವನ್ನು ಹೇಗೆ ಮುಂದುವರಿಸಲಿ? ನನ್ನನ್ನು ಯಾರು ತಾನೇ ರಕ್ಷಿಪರು? ಏನನ್ನೂ ಮಾಡಲು ಶಕ್ತಿಯಿಲ್ಲದವನಾಗಿ



## ತಿರುಮಲೆಯಲ್ಲಿ ವಸತಿ ಸೇವಾಶುಲ್ಕ ಪರಿಷ್ಕರಣ

ತಿರುಮಲೆಯಲ್ಲಿನ ಗಣ್ಯವ್ಯಕ್ತಿಗಳ ವಸತಿಗಳ ದಿನಂಪ್ರತಿ ಸೇವಾಶುಲ್ಕವನ್ನು ಕೆಳಕಂಡಂತೆ ಪರಿಷ್ಕರಣಗೊಳಿಸಲಾಗಿದೆ. ಯಾತ್ರಿಕರು ದಯವಿಟ್ಟು ಗಮನಿಸಿ ಈ ಹೊಸ ದರ ಪಟ್ಟಿಯಂತೆ ಸೇವಾ ಶುಲ್ಕವನ್ನು ಸಲ್ಲಿಸಬೇಕೆಂದು ಕೋರಲಾಗಿದೆ

| | ವಸತಿಯ ವಿವರ | ಹಿಂದಿನದರ ದಿನಂಪ್ರತಿ | ಈಗಣ ದರ ದಿನಂಪ್ರತಿ |
|---|---|---|---|
| 1 | ಎಸ್ ಪಿ ಅತಿಥಿಗೃಹ ಪ್ರಾಂತ | | |
| | ಎಸ್ ಪಿ ಜಿ.ಎಚ್ ಅತಿಥಿಗೃಹ | | |
| | ಸೂಟ್ 1 ಹಾಗೂ 9 (ಮಾಸ್ಟರ್‌ಸೂಟ್ಸ್) | ರೂ 1500/- | ರೂ 2500/- |
| | ಸೂಟ್ 2 ರಿಂದ 8 ವರೆಗೆ | ರೂ 500/- | ರೂ 750/- |
| 2 | ಹರಿಸದನ ಅತಿಥಿಗೃಹ | | |
| | ಸೂಟ್ 1ರಿಂದ 7 | ರೂ 1000/- | ರೂ 1500/- |
| 3 | ರಾಜ್ಯಲಕ್ಷ್ಮಿ ಅತಿಥಿಗೃಹ | | |
| | ಸೂಟ್ 1 ರಿಂದ 4 | ರೂ 1000/- | ರೂ 1500/- |
| | ಸೂಟ್ 5 (ಮಾಸ್ಟರ್ ಸೂಟ್) | ರೂ 1500/- | ರೂ 1500/- |
| 4 | ವಿದ್ಯಾಸದನ ಅತಿಥಿಗೃಹ | | |
| | ಸೂಟ್ 2 ರಿಂದ 5 | ರೂ 500/- | ರೂ 750/- |
| | ಸೂಟ್ 1 (ಮಾಸ್ಟರ್ ಸೂಟ್) | ರೂ 1500/- | ರೂ 2000/- |
| 5 | ಶ್ರೀನಿವಾಸ ನಿಲಯಂ | | |
| | ಸೂಟ್ 1 ರಿಂದ 4 | ರೂ 500/- | ರೂ 1000/- |
| | ಸೂಟ್ 5 | ರೂ 500/- | ರೂ 500/- |
| 6 | ಇಂದಿರಾ ಅತಿಥಿಗೃಹ | | |
| | ಸೂಟ್ 1 ರಿಂದ 4 | ರೂ 500/- | ರೂ 750/- |
| 7 | ಗೋದಾವರಿ ಅತಿಥಿಗೃಹ | | |
| | ಸೂಟ್ 1 ರಿಂದ 4 | ರೂ 500/- | ರೂ 750/- |
| 8 | ಎಸ್ ವಿ ಅತಿಥಿಗೃಹ ಪ್ರಾಂತ | | |
| | ವಿಶೇಷ ರೀತಿಯ ಕಾಟೇಜುಗಳು | | |
| | ಎನ್ ಜಿ ಸಿ ಕಾಟೇಜುಗಳು | | |
| | 1 ರಿಂದ 18, 20,22 | ರೂ 400/- | ರೂ 600/- |
| 9 | ನೂತನ ಅತಿಥಿಗೃಹಗಳು | | |
| | ಅ) ವಿಷ್ಣು ನಿಲಯ | | ರೂ 750/- |
| | ಒಳಗಣ 3 ಸೂಟ್‌ಗಳು | | |
| | ನೆಲ ಅಂತಸ್ತು - 2 ಸೂಟುಗಳು | | ರೂ 750/- |
| | ಮೊದಲ ಅಂತಸ್ತು ಮಾಸ್ಟರ್ ಸೂಟ್ | | ರೂ 2000/- |
| | ಆ) ಬಾಲಾಜಿ ಕುಟೀರ | | |
| | 6 ಸೂಟ್‌ಗಳು (ಧರ್ಮಗಿರಿ ರಸ್ತೆ) | | ರೂ 750/- |

ಯಾತ್ರಿಕ ಭಕ್ತರು ಮೇಲಿನ ಪರಿಷ್ಕೃತ ದರಗಳನ್ನು ಗಮನಿಸಿ ವಸತಿ ಸೌಕರ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ

**ತಿ. ತಿ. ದೇ.**

ರುವೆನಲ್ಲಾ? ಇಂತಹ ಸ್ಥಿತಿಯಲ್ಲಿ ನನಗೆ ಯಾರು ತಾನೇ ಗತಿ? ಮೂಢನಂತಾಗಿ ಬಿಟ್ಟಿರುವೆನಲ್ಲಾ' ಎಂದು ಹಲವಾರು ರೀತಿಯಲ್ಲಿ ಪರಿತಪಿಸಿ, ಬೇರೆ ಯಾವುದೇ ದಾರಿ ಕಾಣದೆ, ಸರ್ವಲೋಕ ರಕ್ಷಕನಾದ ಶ್ರೀಮನ್ನಾರಾಯಣನಲ್ಲಿ ಶರಣು ಹೋಗೋಣ. ಅವನೇ ಈ ಆಪತ್ತಿನಿಂದ ನನ್ನನ್ನು ಉದ್ಧರಿಸಲು ಶಕ್ತನು ಎಂದು ನಿಶ್ಚಯಿಸಿಕೊಂಡು - ಸರ್ವೇಶ್ವರಾ! ನೀನೇ ತಾನೇ ನನ್ನನ್ನು ಸೃಷ್ಟಿಸಿ, ಈ ಲೋಕದ ಸೃಷ್ಟಿಗೆ ಆಜ್ಞಾಪಿಸಿದೆ. ನಾನು ನಿನ್ನ ಪಾದಾರವಿಂದಗಳಲ್ಲಿ ಎಂತಹುದಾದರೂ ಅಪಚಾರಪಟ್ಟಿದ್ದರೂ ಕ್ಷಮಿಸು ವವನಾಗು ಅಸುರರಿಂದ ಅಪಹರಿಸಲ್ಪಟ್ಟಿರುವ ವೇದಗಳನ್ನು ಪುನಃ ನನಗೆ ತಂದುಕೊಟ್ಟು ನನ್ನನ್ನು ಕಾಪಾಡು - ಎಂದು ಪ್ರಾರ್ಥಿಸಿ ಸ್ತುತಿಸಿದನು

ಬ್ರಹ್ಮನ ಸ್ತುತಿಗೆ ಕರುಣೆ ತೋರಿದ ಭಗವಂತನು ತಕ್ಷಣವೇ ಹಯಗ್ರೀವನ (ಕುದುರೆ ಮುಖದವ) ರೂಪ ಪಡೆದನು. ಭೂಮಿಯು ಹಣೆಯಾಗಿರಲು ಗಂಗೆ ಸರಸ್ವತಿಯರು ಎರಡು ಹುಬ್ಬುಗಳಾದರು. ಚಂದ್ರ ಸೂರ್ಯರು ಎರಡು ಕಣ್ಣುಗಳಾಗಿಯೂ, ಸಂಧ್ಯೆಯು ನಾಸಿಕವಾಗಿಯೂ, ಪಿತೃದೇವತೆಗಳು ಹಲ್ಲುಗಳಾಗಿಯೂ, ಗೋಲೋಕ, ಬ್ರಹ್ಮಲೋಕಗಳು ಎರಡು ತುಟಿಗಳಾಗಿಯೂ, ಕಾಳರಾತ್ರಿಯು ಕತ್ತಾಗಿಯೂ ಬೆಳಗಿದವು. ನಕ್ಷತ್ರಗಳು ತುಂಬಿದ ಸ್ವರ್ಗವು ಅವನ ಶಿರಸ್ಸಾಯಿತು. ಶರೀರವೆಲ್ಲವೂ ಸಹಸ್ರಸೂರ್ಯರುಗಳ ಕಿರಣಗಳಂತೆ ಪ್ರಕಾಶಿಸಿದವು. ಇಂತಹ ಅದ್ಭುತ ಸ್ವರೂಪ ಪಡೆದ ಭಗವಂತನು ಪಾತಾಳಲೋಕಕ್ಕೆ ಹೋಗಿ ಮದುಕೈಟಭರು ಮರೆಸಿಟ್ಟಿದ್ದ ವೇದಗಳನ್ನು ಹುಡುಕಿ ಎತ್ತಿಕೊಂಡು ಬಂದು, ಬ್ರಹ್ಮನಿಗೆ ಕೊಟ್ಟು ಅವುಗಳನ್ನು ಉಪದೇಶಿಸಿದನು. ನಂತರ ಹಾಗೆಯೇ ಕ್ಷೀರಸಮುದ್ರದಲ್ಲಿ ಪವಡಿಸಿದವನಾಗಿ ಯೋಗನಿದ್ರೆಯಲ್ಲಿದ್ದನು. ಇತ್ತ ಕಡೆ, ಮಧುಕೈಟಭರು ತಾವಿಟ್ಟಿದ್ದ ಸ್ಥಳದಲ್ಲಿ ವೇದಗಳು ಕಾಣದೇಹೋಗಿ, ಇವನ್ನು ಯಾರು ಕೊಂಡೊಯ್ದಿರಬಹುದು ಎಂದು ಯೋಚಿಸಿ, ಹುಡುಕಲಾರಂಭಿಸಿ ಬ್ರಹ್ಮನಿರುವ ಸತ್ಯಲೋಕದೆಡೆಗೆ ಹೋಗಲು ಮುಂದಾದಾಗ, ಮಾರ್ಗಮಧ್ಯದಲ್ಲಿ ಸಮುದ್ರದಲ್ಲಿ ಅನಂತರೂಪನಾಗಿ ಪವಡಿಸಿರುವ ವಿಶಿಷ್ಟರೂಪೀ ಭಗವಂತನನ್ನು ಕಂಡು, ಈತನೇ ವೇದಗಳನ್ನು ತೆಗೆದುಕೊಂಡು ಬಂದಿರಬಹುದು ಎಂದು ನಿಶ್ಚಯಿಸಿ ಯೋಗನಿದ್ರಾರೂಢನಾದ ಶ್ರೀಶನನ್ನು ಎಚ್ಚರಗೊಳಿಸಿ ಯುದ್ಧ ಮಾಡಲುಪಕ್ರಮಿಸಿದರು. ಸತ್ವಗುಣಸ್ವರೂಪಿಯಾದ ಹಯಗ್ರೀವ ಸ್ವಾಮಿಯು ಆ, ರಜಸ್ತಮೋ ಗುಣ ಭೂಯಿಷ್ಠರಾದ ರಾಕ್ಷಸರೀರ್ವ

ರನ್ನೂ ಸಂಹಾರಮಾಡಿ ಬ್ರಹ್ಮನನ್ನು ಅನುಗ್ರಹಿಸಿ ಅವರನ್ನು ನಿರ್ಭಯನನ್ನಾಗಿಸಿದನು ಎಂದು ಮಹಾಭಾರತವು ವಿಶ್ಲೇಷಿಸುವುದು

ಮಹಾಭಾರತದ ಶಾಂತಿಪರ್ವದಲ್ಲಿ ಮತ್ತೊಂದೆಡೆ ತಾನು ದೇವತೆಗಳಿಗೂ ಪಿತೃಗಳಿಗೂ ಆದಿಸಿತಾವೆಂದೂ, ಚೇತನರು (ಮನುಷ್ಯರು) ಶ್ರದ್ಧೆಯಿಂದ ಕೊಡುವ ಹವಿರ್ಭಾಗವನ್ನು ಹಯಗ್ರೀವ ರೂಪಿಯಾಗಿದ್ದು ಸ್ವೀಕರಿಸುತ್ತೇನೆಂದು ಭಗವಂತನೇ ಘೋಷಿಸಿರುವುದಾಗಿ ಉಲ್ಲೇಖವಿದೆ

ಅಂತೆಯೇ ಮಹಾಭಾರತದ ಉದ್ಯೋಗಪರ್ವದಲ್ಲಿ ಕ್ಷೀರಸಾಗರದಲ್ಲಿ ಪವಡಿಸಿದ್ದ ಭಗವಂತನು ಮಧುಕೈಟಭರನ್ನು ಸಂಹರಿಸಿದನೆಂದೂ, ಬೇರೆ ಕಲ್ಪದಲ್ಲಿ ಹಯಗ್ರೀವ ಎಂಬ ಅಸುರನು ಕೊಲ್ಲಲ್ಪಟ್ಟನೆಂದೂ ತಿಳಿಸುತ್ತದೆ

ಶ್ರೀಮದ್ಭಾಗವತದಲ್ಲಿ, ಬ್ರಹ್ಮನು ಮಾಡಿದ ಯಾಗದಲ್ಲಿ ಯಜ್ಞಪುರುಷನಾದ ಭಗವಂತನು ಹಯಗ್ರೀವನಾಗಿ ಆವಿರ್ಭವಿಸಿದನೆಂದೂ, ಅವನು ಎಲ್ಲಾ ವೇದ ಮತ್ತು ಯಾಗ ದೇವತಾ ಸ್ವರೂಪನಾಗಿ ಇದ್ದನೆಂದೂ ಅವನ ಉಚ್ಛ್ವಾಸದ ಗಾಳಿಯಿಂದ ವೇದಗಳು ಹೊರಬಂದಿತೆಂದು ಬ್ರಹ್ಮನು ಹೇಳಿದನೆಂದು ವಿವರಿಸಿದೆ

ಶ್ರೀಮದ್ಭಾಗವತದ ಬೇರೊಂದೆಡೆಯಲ್ಲಿ ಹಯಗ್ರೀವನೆಂಬ ಅಸುರನು ವೇದಗಳನ್ನು ಅಪಹರಿಸಿಕೊಂಡು ಹೋದನೆಂದೂ, ಭಗವಂತನು ಮತ್ಸ್ಯಾವತಾರವನ್ನೆತ್ತಿ ಅಸುರನನ್ನು ಸಂಹರಿಸಿ ವೇದಗಳನ್ನು ಕಾಪಾಡಿದನೆಂದು ಹೇಳಲ್ಪಟ್ಟಿದೆ

ದೇವೀಭಾಗವತದಲ್ಲಿ, ಹಯಗ್ರೀವ ಎಂಬೊಬ್ಬ ಅಸುರನು ಘೋರ ತಪಸ್ಸು ಮಾಡಿದನು ಅವನ ತಪಸ್ಸಿಗೆ ಪ್ರಸನ್ನಳಾದ ಅಂಬಿಕೆಯಲ್ಲಿ, ಆ ಅಸುರನು ತನಗೆ ಮರಣವೇ ಇಲ್ಲದಿರುವ ವರವನ್ನು ಬೇಡಿದನು ಅದಕ್ಕೆ ಮಹಾಮಾತೆಯು, ವಿಧಿನಿಯಮದಂತೆ ಈ ಮರ್ತ್ಯಲೋಕದಲ್ಲಿ ಜನಿಸಿದವರು ಯಾರೇ ಆಗಲಿ, ಮರಣಹೊಂದಲೇಬೇಕು ಆದ್ದರಿಂದ ಬೇರೆ ಏನಾದರೂ ವರವನ್ನು ಕೇಳೆಂದಳು ಸ್ವತಃ ತಾನು ಕುದುರೆ ಮುಖದವನಾಗಿದ್ದ ಆ ಅಸುರನು, ಭೂಲೋಕದಲ್ಲಿ ಬೇರೊಬ್ಬ ತನಗಿಂತ ಬಲಿಷ್ಠನಾದ ಕುದುರೆಮುಖದವನು ಇರಲು ಸಾಧ್ಯವೇ ಇಲ್ಲವೆಂದು ಯೋಚಿಸಿ, ಅದನ್ನೇ ಉಪಾಯವಾಗಿ ಮಾಡಿಕೊಂಡು, ವರವನ್ನು ಪಡೆದು ಮರಣವೇ ಇಲ್ಲದವನಾಗಿ ಬಿಡೋಣವೆಂದು ನಿಶ್ಚಯಿಸಿ - ದೇವೀ ! ಅತ್ಯಂತ ಬಲಿಷ್ಠನಾದ ಬೇರೊಬ್ಬ ಕುದುರೆ ಮುಖದವನಿಂದಲೇ ತನಗೆ ಮರಣವೇ ಹೊರತು ಬೇರೆ ಯಾರಿಂದಲೂ ಕೂಡದು ಎಂದು ಬೇಡಿದನು ಅಂತೆಯೇ, ದೇವಿಯೂ ಅಭಯ ನೀಡಿದಳು ಮುಂದೆ ಅಸುರ ಹಯಮುಖನು ವೇದವನ್ನು ಅಪಹರಿಸಲು ಅವನನ್ನು ಸಂಹರಿಸಲೆಂದು ಭಗವಂತನು ಹಯಗ್ರೀವ ಅವತಾರವೆತ್ತಿದನು ಎಂದು ವರ್ಣಿಸಿದೆ

ಈ ರೀತಿಯಾಗಿ ಅಸುರರ ಹೆಸರು ಕಲ್ಪಭೇದದಿಂದ ಬೇರೆ ಬೇರೆಯಾಗಿದ್ದರೂ ವೇದವನ್ನು ಅಪಹರಿಸಿದ ಅಸುರನನ್ನು ಹಯಗ್ರೀವ ರೂಪೀ ಭಗವಂತನು ಸಂಹಾರಮಾಡಿ ವೇದಗಳನ್ನು ಕಾಪಾಡಿ ಬ್ರಹ್ಮನಿಗೆ ಪುನಃ ಕೊಟ್ಟು ಉಪದೇಶಿಸಿದನು ಎಂಬುದರಲ್ಲಿ ಮೇಲ್ಕಂಡ ಪುರಾಣಗಳಲ್ಲಿ ಸಾಮ್ಯತೆಯನ್ನು ಕಾಣಬಹುದು

ಆದ್ದರಿಂದಲೇ ವೇದಾಂತದೇಶಿಕರು "ದೈತ್ಯಾಪನೀತಾನ್ ದಯಯೈವ ಭೂಯೋಪ್ಯಧ್ಯಾಪಯಿಷ್ಯೋನಿಗಮಾನ್ನ ಚೇತ್ತ್ವಮ್" ಎಂದು - ಹೇ ಹಯಗ್ರೀವ! ಅಸುರರಿಂದ ಅಪಹರಿಸಲ್ಪಟ್ಟ ವೇದಗಳನ್ನು ತಂದು ಪುನಃ ನೀನು ಬ್ರಹ್ಮನಿಗೆ ಉಪದೇಶಿಸದೇ ಹೋಗಿದ್ದರೆ, ಬ್ರಹ್ಮನು ಅಜ್ಞನಾಗಿ ಬಿಟ್ಟಿರುತ್ತಿದ್ದನು ಎಂದು ಸ್ತುತಿಸಿರುವರು ಒಟ್ಟಿನಲ್ಲಿ ಅಸುರರಿಂದ ವೇದದ ಅಪಹಾರವಾಯಿತು ಎಂದಿರುವರೇ ಹೊರತು ಆ ಅಸುರನ ಹೆಸರನ್ನು ನಿರ್ದೇಶಿಸಲಿಲ್ಲ

ವಾಕ್ಕಿಗೆ ಅಧಿಪತಿಯಾಗಿ ಲೋಕದಲ್ಲಿ ಪ್ರಸಿದ್ಧಿಹೊಂದಿರುವ ಪರಶಿವನ ಅಂಶ ಅವತಾರವೇ ಆದ ದಕ್ಷಿಣಾಮೂರ್ತಿಯೂ, ಬ್ರಹ್ಮನ ಪಟ್ಟಮಹಿಷಿಯಾದ ಸರಸ್ವತೀ ದೇವಿಯೂ ಕೂಡ ಶ್ರೀ ಹಯಗ್ರೀವ ರೂಪಿಯಾದ ಶ್ರೀಮನ್ನಾರಾಯಣನ ಶಕ್ತ್ಯಂಶಗಳನ್ನು ಪಡೆದು ಪ್ರಕಾಶಿಸಿದರು ಎಂದು ಉಲ್ಲೇಖವಿದೆ

ಸಾಹಿತ್ಯ ಲೋಕದ ಎಲ್ಲಾ ಕ್ಷೇತ್ರಗಳಿಗೂ ತಮ್ಮ ಅನ್ಯಾದೃಶವಾದ ಕೊಡುಗೆಯನ್ನು ಕೊಟ್ಟಿರುವ ವೇದಾಂತದೇಶಿಕರು "ವೆಳ್ಳೈ ಪರಿಮುಖರ್ ದೇಶಿಕರಾಯ್ ವಿರಹಾಲಡಿಯೋಮ್, ಉಳ್ಳತ್ತೆಳುದಿಯ ಮೋಲೈಯಿಲಿಟ್ಟಿನಮ್" - ತಮ್ಮ ಯಾವುದೇ ಕೃತಿಗೂ ಆ ಹಯಗ್ರೀವ ಮಂತ್ರವನ್ನು ಉಪಾಸಿಸಿ ಅವನ ಸಾಕ್ಷಾತ್ಕಾರವನ್ನು ಪಡೆದು ಅವನ ಸಂಕಲ್ಪರೂಪ ದಿವ್ಯ ಅನುಗ್ರಹದಿಂದ ಮಾತ್ರ ಸಾಧ್ಯವಾಯಿತು ಎಂದು ಸ್ಮರಿಸಿದ್ದಾರೆ

ಷೋಡಶ ಕರ್ಮಗಳಲ್ಲಿ ಒಂದಾದ ಅಕ್ಷರಾಭ್ಯಾಸ - ವಿದ್ಯಾರಂಭ ಶಾಸ್ತ್ರ ಮಾಡುವಾಗ "ಓಂ ಹಯಗ್ರೀವಾಯನಮಃ" ಎಂದೇ ಮೊದಲಕ್ಷರವಾಗಿ ಬರೆಯಿಸಿ ಅವನನ್ನು ಧ್ಯಾನಿಸಿ ಆವಾಹಿಸಿ, ಪೂಜಿಸುವ ಪದ್ಧತಿಯು ಆರ್ಷೇಯವಾಗಿ ನಡೆದು ಬಂದ ಪದ್ಧತಿಯಾಗಿದೆ

ಕಾಶ್ಮೀರ ಪುರನಿವಾಸರಸಿಕಳಾದ ಮಹಾಮಾತೆ ಸರಸ್ವತಿಗೂ, ಆದಿಶೇಷನ ಅಂಶಾವತಾರರೂ ವಿಶಿಷ್ಟಾದ್ವೈತಸಿದ್ಧಾಂತ ಸ್ಥಾಪಕರೂ ಆದ ಭಗವದ್ರಾಮಾನುಜರಿಗೂ ನಡೆದ ವ್ಯಾಖ್ಯಾರ್ಥ ಗೋಷ್ಠಿಯಲ್ಲಿ ರಾಮಾನುಜರ ಪ್ರತಿಪಾದನಾ ಶೈಲಿಗೆ ಮನಸೋತ ಶ್ರೀದೇವಿಯು ತನ್ನ ಆರಾಧ್ಯದೈವವಾದ ಶ್ರೀಲಕ್ಷ್ಮೀ ಹಯಗ್ರೀವ ಮೂರ್ತಿಯನ್ನು ಬಹುಮಾನವಾಗಿ ಅನುಗ್ರಹಿಸಿದಳೆಂದೂ, ಕಾಲಕ್ರಮದಲ್ಲಿ ಆ ಮೂರ್ತಿಯು ವೇದಾಂತದೇಶಿಕರಿಗೆ ಲಕ್ಷ್ಯವಾಯಿತೆಂದೂ, ಈ ಮೂರ್ತಿಯ ಪ್ರಭಾವದಿಂದ ವೇದಾಂತದೇಶಿಕರು ಸಿದ್ಧಾಂತ, ಶಾಸ್ತ್ರ, ಸಾಹಿತ್ಯ, ಕಾವ್ಯ ಸ್ತೋತ್ರಾದಿಯಾಗಿ ಅತಿಮಾನುಷವಾದ ಸಾಹಿತ್ಯ ಸೇವೆ ಮಾಡಿದರೆಂದೂ ಪ್ರತೀತಿ ಇದೆ ಸ್ವಾಮಿ ದೇಶಿಕರು ಆ ಮೂರ್ತಿಯನ್ನು ತಮ್ಮ ಪರಮ ಶಿಷ್ಯರಾದ, ಸನ್ಯಾಸಾಶ್ರಮಿಗಳಾದ ಬ್ರಹ್ಮತಂತ್ರಪರಕಾಲ ಜೀಯರಿಗೆ ದಯಪಾಲಿಸಿದರೆಂದೂ, ಅದೇ ಬ್ರಹ್ಮತಂತ್ರ ಪರಕಾಲ ಜೀಯರಿಂದ ಸುಮಾರು ೭೦೦ ವರ್ಷಗಳ ಹಿಂದೆ ಮೊದಲು ತಿರುಪತಿ ಕ್ಷೇತ್ರದಲ್ಲಿ ಒಂದು ಮಠ ಸ್ಥಾಪಿಸಲ್ಪಟ್ಟು ಕಾಲಕ್ರಮದಲ್ಲಿ ಮೈಸೂರು ಅರಸರ ಪ್ರಾರ್ಥನೆಯ ಮೇರೆಗೆ ತಿರುಪತಿಯಿಂದ ಮೈಸೂರು ನಗರವನ್ನು ತಮ್ಮ ಮೂಲ ಮಠವನ್ನಾಗಿ ಮಾಡಿಕೊಂಡುದಾಗಿ ಮೈಸೂರು ಅರಸರ ಚರಿತ್ರೆಯು ಉಲ್ಲೇಖಿಸುತ್ತದೆ ಅರಮನೆಯ ಸಮೀಪವಿರುವ ಮೈಸೂರು ನಗರದ ಬ್ರಹ್ಮತಂತ್ರ ಸ್ವತಂತ್ರ ಪರಕಾಲಮಠದಲ್ಲಿ ಆ ದಿವ್ಯ ಮಂಗಳ ಮೂರ್ತಿಯು ವಿಶೇಷವಾಗಿ, ವಿಶಿಷ್ಟರೀತಿಯಲ್ಲಿ ಅನುಸ್ಯೂತವಾಗಿ ನಡೆದುಬಂದಿರುವ ಸಾಕ್ಷಾತ್ ಯತಿವರ್ಯರ ದಿವ್ಯ ಹಸ್ತಗಳಿಂದ ತ್ರಿಕಾಲ ಪೂಜೆಯನ್ನು ಪಡೆಯುತ್ತಿರುವುದನ್ನು ಇಂದಿಗೂ ದರ್ಶಿಸಿ ವರಪಡೆದು ಕೃತಕೃತ್ಯತೆಯನ್ನು ಪಡೆಯಬಹುದಾಗಿದೆ ಇಂತಹ ಅನಿತರ ಸಾಧಾರಣನಾದ ಹಯಗ್ರೀವಸ್ವಾಮಿಯು ಮೈಸೂರು ನಗರದಲ್ಲಿ ನೆಲೆಗೊಂಡು ಭಕ್ತರನ್ನು ಅನುಗ್ರಹಿಸಿ ಪ್ರಕಾಶಿಸುತ್ತಿರುವುದು ನಮ್ಮ ಕರ್ನಾಟ ದೇಶದ ಜನತೆಯ, ಅದರಲ್ಲೂ ವಿಶೇಷವಾಗಿ ಮೈಸೂರು ಪುರವಾಸಿಗಳ ಸುಕೃತ ವಿಶೇಷವೇ ಆಗಿದೆ

ಕರ್ನಾಟಕ ಭಾಷೆಯಲ್ಲಿ ಭಾಗವತ ದರ್ಮವನ್ನು ಪ್ರಚಾರ ಮಾಡಿದ ಯತಿವರ್ಯರಲ್ಲಿ ನಾಲ್ಕನೆಯವರಾದ ವಾದಿರಾಜರು ಧಾರ್ಮಿಕ ಕ್ಷೇತ್ರದಲ್ಲಿ ತಮ್ಮದೇ ಆದ ವಿಶಿಷ್ಟವಾದ ಸ್ಥಾನವನ್ನು ಪಡೆದಿದ್ದಾರೆ ಅವರಲ್ಲಿ ನಡೆದ ಪವಾಡಗಳು ಮತ್ತು ಅವರು ನಡೆಸಿದ ಮಹತ್ಕಾರ್ಯಗಳ ದೆಸೆಯಿಂದ ಅವರ ಅನುಯಾಯಿಗಳು ಅವರನ್ನು ಒಬ್ಬ ದೇವಾಂಶಸಂಭೂತರೆಂದೇ ಪರಿಗಣಿಸಿದ್ದಾರೆ ಸ್ವಾದೀ ಮಠದ ಹಿಂದಿನ ಯತಿವರ್ಯರಾದ ವಾಗೀಶರ ಅನುಗ್ರಹದ ಮೇರೆಗೆ ದಕ್ಷಿಣ ಕನ್ನಡ ಜಿಲ್ಲೆಯ ಕುಂಭಾಸಿಯಬಳಿ ಹೂವಿನಕೆರೆ ಗ್ರಾಮನಿವಾಸಿಗಳಾದ ಶ್ರೀಮತಿ ಗೌರೀದೇವೀ ಮತ್ತು ಶ್ರೀರಾಮ ಭಟ್ಟರೆಂಬ ಬ್ರಾಹ್ಮಣ ದಂಪತಿಗಳಿಗೆ ಭೂವರರೆಂಬ ಕುಮಾರರು ಜನಿಸಿ ಮುಂದೆ ಸಕಲ ಶಾಸ್ತ್ರ ಕೋವಿದರಾಗಿ ವಾದಿ ನಿಗ್ರಹಕ್ಕೆ ಹೆಸರಾಗಿ "ವಾದಿರಾಜ ತೀರ್ಥ" ರೆಂಬ ಅನ್ವರ್ಥನಾಮಧೇಯರಾಗಿ ಪ್ರಸಿದ್ಧ ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಸ್ವಾದೀ ಮಠದ ಪೀಠವನ್ನು ಅಲಂಕರಿಸಿದರು ವಾಗೀಶ ಯತಿವರ್ಯರಿಂದ ಹಯಗ್ರೀವ ಮಂತ್ರೋಪದೇಶವನ್ನು ಪಡೆದು, ಶ್ರೀಶನ ಪರಮ ಉಪಾಸಕರಾಗಿ, ಆ ಮಂತ್ರಸಿದ್ಧಿಯ ಬಲದಿಂದ ಅಸ್ವಾದೃಶ ಪ್ರೌಢಿಮೆಯನ್ನು ಪಡೆದು ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿ ರುಕ್ಮಿಣೀಶವಿಜಯ, ತೀರ್ಥಪ್ರಬಂಧ, ಯುಕ್ತಿಮಲ್ಲಿಕೆ - ಇವೇ ಮುಂತಾದ ನೂರಾರು ಕೃತಿಗಳ ಮತ್ತು ಸಹಸ್ರಾರು ದೇವರ ನಾಮಗಳ (ಹಾಡುಗಳ) ರಚನಕಾರರೂ ಆದರಲ್ಲದೇ, ಉಡುಪಿ ಕ್ಷೇತ್ರದಲ್ಲಿ ಶ್ರೀಕೃಷ್ಣನ ಮೂರ್ತಿ, ಧರ್ಮಸ್ಥಳಕ್ಷೇತ್ರದಲ್ಲಿ ಮಂಜುನಾಥೇಶ್ವರ ಮೂರ್ತಿಯ ಪೂಜಾವ್ಯವಸ್ಥೆಗೆ ಕಾರಣ ಪುರುಷರೂ ಆದರು



ಅತ್ಯಂತ ಶ್ರೇಷ್ಠ ಹಯಗ್ರೀವೋಪಾಸಕರಾದ ವಾದಿರಾಜರು ಅಪ್ರತಿಮ ಪವಾಡ ಪುರುಷರು ಒಂದು ದಿನ, ಅವರ ಕನಸಿನಲ್ಲಿ ಸ್ವಾಮಿ ಹಯಗ್ರೀವನು ಬಂದು ತನ್ನ ಹಸಿವೆಯನ್ನು ತೋಡಿಕೊಳ್ಳಲಾಗಿ, ಪರವಶರಾದ ವಾದಿರಾಜಯತಿವರ್ಯರು ಪ್ರತಿನಿತ್ಯವೂ ಒಂದು ಹರಿವಾಣದ ತುಂಬ ಕಡಲೆಯ ಹೂರಣವನ್ನು ಮಾಡಿಸಿ ಅದನ್ನು ತನ್ನ ತಲೆಯ ಮೇಲಿಟ್ಟುಕೊಂಡು ಏಕಾಂತಸ್ಥಳದಲ್ಲಿ ಕುಳಿತು ಶ್ರೀಸ್ವಾಮಿಯ ಧ್ಯಾನಮಾಡಲು ಆರಂಭಿಸಿದರು ಪರಮಾತ್ಮನು ದಿವ್ಯ ಶ್ವೇತಾಶ್ವರೂಪಿಯಾಗಿ ದರ್ಶನವಿತ್ತು ತನ್ನೆರಡು ಖುರಗಳನ್ನು ವಾದಿರಾಜರ ಹೆಗಲಮೇಲಿಟ್ಟುಕೊಂಡು ಆ ಹರಿವಾಣದಲ್ಲಿರುವ ಹೂರಣವನ್ನು ಸ್ವೀಕರಿಸುತ್ತಿದ್ದನು ಇದು ನಿಯಮದಂತೆ ದಿನಂಪ್ರತಿ ನಡೆಯಲುಪಕ್ರಮಿಸಿತು ಆ ಪಾತ್ರೆಯಲ್ಲಿ ಮಿಕ್ಕ ಶೇಷಪ್ರಸಾದವೇ ವಾದಿರಾಜರ ನಿತ್ಯಾಹಾರವಾಗುತ್ತಾ ಬಂದಿತು

ದಕ್ಷಿಣ - ಉತ್ತರ ಕನ್ನಡ ಜಿಲ್ಲೆಯ ವಿವಿದ ಕಲಾಕುಶಲರಾದ ಸ್ವರ್ಣಕಾರರಲ್ಲಿ ಒಬ್ಬನು ಗಣಪತಿ ವಿಗ್ರಹಕ್ಕಾಗಿ ಪ್ರಯತ್ನಿಸಿ ಅದು ಹಯಗ್ರೀವ ವಿಗ್ರಹವಾಗಿ ಬರಲು, ಇದರಿಂದ ದಿಗ್ಭ್ರಾಂತನಾದ ಸ್ವರ್ಣಕಾರನಿಗೆ ಸ್ವಪ್ನವಾಗಲ್ಪಟ್ಟು, ಆ ವಿಗ್ರಹವನ್ನು ವಾದಿರಾಜರಿಗೆ ಸಮರ್ಪಿಸುವುದರ ಮೂಲಕ ಆ ಕುಲಬಾಂಧವರೆಲ್ಲರೂ ರಾಜರ ಶಿಷ್ಯ ಪರಂಪರೆಗೆ ಸೇರಿದರು ಆ ದಿವ್ಯ ಮಂಗಳ ಮೂರ್ತಿಯನ್ನು ಇಂದಿಗೂ ಸ್ವಾದೀ ಮಠದಲ್ಲಿ ದರ್ಶಿಸಬಹುದಾಗಿದೆ ವಾದಿರಾಜರ ಜೀವಿತ ಕಾಲದಲ್ಲಿ ನಡೆದ ಇಂತಹ ಪವಾಡಗಳು ನೂರಾರು

ಒಂದು ದಿನ ವಾದಿರಾಜರ ಪರಮೋನ್ನತಿಯನ್ನು ಸಹಿಸದ ಪರಿಜನರಲ್ಲೇ ಕೆಲವರು ಅವರನ್ನು ಮುಗಿಸಿ ಬಿಡಬೇಕೆಂದು ದುರ್ಮಂತ್ರಾಲೋಚನೆ ನಡೆಸಿ, ಅಂದಿನ ಹೂರಣದಲ್ಲಿ ಕಠೋರವಾದ ವಿಷಬೆರಸಿಡಲಾಗಿ, ಎಂದಿನಂತೆ (ಆ ವಿಷಮಿಶ್ರಿತ) ಹೂರಣವನ್ನು ಹಯಗ್ರೀವನಿಗೆ ಭಕ್ತಿಭಾವದಿಂದ ರಾಜರು ಸಮರ್ಪಿಸಲಾಗಿ, ಅಂದು ದೇವರು ಶೇಷಪ್ರಸಾದವನ್ನು ಉಳಿಸದೇ ಪೂರ್ಣವಾಗಿ ಭುಜಿಸಿಬಿಟ್ಟನು ತನಗೆ (ಆಹಾರವನ್ನು) ಪ್ರಸಾದವನ್ನು ಮಿಗಿಸದೇ ಅಂದು ಉಪವಾಸ ಕೆಡವಿದ ಕಾರಣವನ್ನು ಶ್ರೀಶನಲ್ಲಿ ಅತ್ಯಂತ ವಿನಯಪೂರ್ವಕ ಭಿನ್ನವಿಸಲಾಗಿ, ತನ್ನ ಪರಮ ಭಕ್ತನನ್ನು ಪರಿಪಾಲಿಸಲೋಸುಗ ತಾನು ನಡೆಸಿದ ಕಾರ್ಯವನ್ನು ತಿಳಿಸಿ, ತನ್ಮೂಲಕ ಭಕ್ತಾನುಗ್ರಹನಾದನು ವಾದಿರಾಜರು ಪೂಜಿಸುತ್ತಿದ್ದ ಹಯಗ್ರೀವ ಮೂರ್ತಿಯ ಕುತ್ತಿಗೆಯಲ್ಲಿ ಸ್ವಲ್ಪ ಪ್ರದೇಶವು ಹಸಿರುಬಣ್ಣವಾಗಿ ಕಾಣುತ್ತಿರುವುದನ್ನು ಇಂದಿಗೂ ಸ್ವಾದೀ ಮಠದಲ್ಲಿರುವ ಶ್ರೀ ಹಯಗ್ರೀವ ಸ್ವಾಮಿಯಲ್ಲಿ ದರ್ಶನ ಪಡೆಯಬಹುದಾಗಿದೆ

ಇತ್ತೀಚಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ, ಬಾಲರಿಂದ ಹಿಡಿದು ಯುವಕರವರೆಗೆ ತಮ್ಮ ಸ್ವಪ್ರತಿಭೆಯಿಂದ ಅತಿಹೆಚ್ಚಿನ ಅಂಕಪಡೆದು ಈ ನಾಡಿನಲ್ಲೂ ಮತ್ತು ಹೊರನಾಡಿನಲ್ಲೂ ಅತ್ಯುನ್ನತವಾದ ವ್ಯಾಸಂಗ (ವಿದ್ಯೆ) ನಂತರ ಉನ್ನತಸ್ಥಾನದ ಉದ್ಯೋಗಕ್ಕಾಗಿ ಅಹೋರಾತ್ರಿ ಹೋರಾಡುತ್ತಿರುವ ಸಕಲ ವಿದ್ಯಾಭಿಲಾಷಿಗಳು-

ಜ್ಞಾನಾನಂದ ಮಯಂ ದೇವಂ
ನಿರ್ಮಲ ಸ್ಫಟಿಕಾಕೃತಿಮ್
ಆಧಾರಂ ಸರ್ವವಿದ್ಯಾನಾಂ
ಹಯಗ್ರೀವ ಮುಪಾಸ್ಮಹೇ

ಎಂಬ ಈ ಮಂತ್ರವನ್ನು ದಿನಂಪ್ರತಿ ಪ್ರಾತಃ ಸಂಧ್ಯಾ ಕಾಲಗಳಲ್ಲಿ ಆರು ಸಲವಾದರೂ ಜಪಿಸಿದರೆ ಮರೆವೆಂಬುದೇ ಇಲ್ಲವಾಗಿ, ವಿಶೇಷ ಬುದ್ಧಿ ಸೂಕ್ಷ್ಮತೆ, ಪ್ರತಿಭೆ, ಫಲ, ಸಾಮರ್ಥ್ಯಗಳನ್ನು ಹೊಂದಿ ಮನೋವಾಂಛಿತ ಫಲವನ್ನು ಪಡೆಯುವರೆಂಬುದರಲ್ಲಿ ಸಂದೇಹವೇ ಇಲ್ಲಾ

ಶ್ರೀ ಹಯಗ್ರೀವ ಮೂರ್ತಿಯ ಮಂದಿರಗಳು ಅತಿವಿರಳ ತಮಿಳುನಾಡಿನ ತಿರುವಹಿಂದ್ರಪುರಂ, ಮದ್ರಾಸಿನ ನಂಗನಲ್ಲೂರು ಮುಂತಾದ ಕ್ಷೇತ್ರಗಳು ಪ್ರಸಿದ್ಧಿಪಡೆದಿವೆ ಶ್ರೀ ಭಗವದ್ರಾಮಾನುಜರ ಮತ್ತು ಶ್ರೀಮನ್ಮಧ್ವಾಚಾರ್ಯರ ಮತಾನುಯಾಯಿಗಳೆಲ್ಲರ ಪ್ರತಿಮನೆಯಲ್ಲಿಯೂ ಶ್ರೀ ಹಯಗ್ರೀವ ಮೂರ್ತಿಯು ಕಡ್ಡಾಯವಾಗಿ ಇದ್ದು ದಿನಂಪ್ರತಿ ನಿತ್ಯಾರಾಧನೆಯನ್ನು ಪಡೆಯುತ್ತಿರುವುದನ್ನು ಇಂದಿಗೂ ಕಾಣಬಹುದಾಗಿದೆ, ವಿದ್ಯಾಭಿಲಾಷಿಗಳಾದ ಯಾವ ಕುಲದವರೇ ಆಗಲಿ ತಾವು ಉದ್ದೇಶಿಸಿದ ವಿದ್ಯೆಯನ್ನು ಪೂರ್ಣವಾಗಿ ಪಡೆಯಬೇಕಾದರೆ ಹಯಗ್ರೀವನ ಸನ್ನಿಧಿಗೆ ದಿನಂಪ್ರತಿ ಹೋಗಿ ಭಗವಂತನ ತೀರ್ಥ ಪ್ರಸಾದವನ್ನು ಸ್ವೀಕರಿಸುತ್ತಾ ಬರುವುದರಿಂದ ತಮ್ಮ ಮನೋರಥ ಪೂರ್ಣಗೊಳ್ಳುವುದರಲ್ಲಿ ನಿಸ್ಸಂದೇಹ

ಈ ರೀತಿಯಾಗಿ ವಿಶೇಷ ವಿದ್ಯೆ, ಸುಜ್ಞಾನ, ವಾಕ್ಚಾತುರ್ಯ, ಸೂಕ್ಷ್ಮಬುದ್ಧಿ ಹಾಗೂ ಸ್ಥೈರ್ಯಬುದ್ಧಿಯನ್ನೂ ಮತ್ತು ಜೀವನದಲ್ಲಿ ಸಕಲವಿಧಸಂಪತ್ತನ್ನೂ ಪಡೆಯಲು ಶ್ರೀಲಕ್ಷ್ಮೀ ಹಯಗ್ರೀವರ ಶರಣು, ಉಪಾಸನೆ, ಪೂಜನೆಯು ಅನಿವಾರ್ಯ ಅನ್ಯಥಾ ಶರಣಂ ನಾಸ್ತಿ

* * *

# ಕೌಟಿಲ್ಯನ ಅರ್ಥಶಾಸ್ತ್ರ

- ಕಂದಾಡೈ ಕೇಶವನ್.

## ಜೀವನ

ಕೌಟಿಲ್ಯನ ಅರ್ಥಶಾಸ್ತ್ರವು ಸಂಸ್ಕೃತ ಭಾಷೆಯಲ್ಲಿ ಅತ್ಯುತ್ತಮವಾದ ರಾಜನೀತಿಯನ್ನು ತಿಳಿಸುವ ಬೃಹದ್ಗ್ರಂಥ, ಪುರಾತನ ಭಾರತದ ಧಾರ್ಮಿಕ ಸಂಸ್ಕೃತಿಯನ್ನು ಎತ್ತಿ ಹಿಡಿಯುವ ನೀತಿ ಶಾಸ್ತ್ರ. ಈ ಅಮೂಲ್ಯಗ್ರಂಥದಲ್ಲಿ ೧೫ ಅಧಿಕರಣಗಳು ೧೫೦ ಅಧ್ಯಾಯಗಳೂ ೧೮೦ ಪ್ರಕರಣಗಳೂ ಹಾಗೂ ೬೦೦೦ ಶ್ಲೋಕಗಳೂ ಇವೆ ಕೌಟಿಲ್ಯನು ಅಪ್ರತಿಮ ರಾಜನೀತಿಜ್ಞನೂ ಶಾಸ್ತ್ರಜ್ಞನೂ ಆಗಿದ್ದನು ಸ್ಮೃತಿ ಇತಿಹಾಸಗಳಲ್ಲಿ ರಾಜಕೀಯ ವಿಷಯಗಳನ್ನು ತಿಳಿಸುವ ಶಾಸ್ತ್ರಕ್ಕೆ ದಂಡನೀತಿ ಎಂದೂ ಕರಯುತ್ತಾರೆ ಇತಿಹಾಸ ಪುರಾಣಗಳಲ್ಲಿ ರಾಜನೀತಿಯೊಡನೆ ದರ್ಮಶಾಸ್ತ್ರವನ್ನೂ ನೀತಿಯನ್ನೂ ದೋಧಿಸುವ ಚಮತ್ಕಾರ ಕೌಟಿಲ್ಯನ ಅರ್ಥಶಾಸ್ತ್ರವಲ್ಲಿ ನಾವು ಕಾಣಬಹುದು ಈತನು ಆಗಿನ ಸಾಮಾಜಿಕ ಹಾಗೂ ರಾಜಕೀಯ ಸಮಸ್ಯೆಗಳನ್ನು ಪೂರ್ವಪಕ್ಷ ಉತ್ತರ ಪಕ್ಷ ಸಿದ್ಧಾಂತಗಳಿಂದ, ವ್ಯಾಖ್ಯಾನ ನಿರ್ವಚನ ಮತ್ತು ನಿದರ್ಶನಗಳಿಂದ ಪರೀಕ್ಷೆಮಾಡಿ ತನ್ನ ಅಗಾಧವಾದ ಶಾಸ್ತ್ರಜ್ಞಾನದಿಂದ ಪರಿಹಾರಗಳನ್ನು ತಿಳಿಸುವ ಜಾಣ್ಮೆ ಅಪೂರ್ವವಾದುದು ಕೌಟಿಲ್ಯನು ತನಗಿಂತ ಹಿಂದಿನ ರಾಜಕೀಯ ಶಾಸ್ತ್ರಕಾರರಾದ ಬೃಹಸ್ಪತಿ ಭಾರದ್ವಾಜ, ವಾತವ್ಯಾಧಿ ಮತ್ತು ಪಿಶುನ ಇವರ ಅಭಿಪ್ರಾಯಗಳನ್ನೂ ತನ್ನ ಅರ್ಥಶಾಸ್ತ್ರದಲ್ಲಿ ವಿಮರ್ಶೆ ಮಾಡಿದ್ದಾನೆ

ಕಾಮಂದಕನ ನೀತಿಸಾರದಲ್ಲಿ ಕೌಟಿಲ್ಯವನ್ನು ವಿಷ್ಣುಗುಪ್ತನೆಂದೂ ಚಾಣಕ್ಯನೆಂದೂ ಆತನೇ ತನ್ನ ಗುರುವೆಂದೂ ಕಾಮಂದಕೀಯನೀತಿ ಸಾರವಲ್ಲಿ ಹೊಗಳುವ ಶ್ಲೋಕ ಹೀಗಿದೆ ಗುರುವನ್ನು ಕೊಂಡಾಡುವ ರೀತಿ

ವಂಶೇ ವಿಶಾಲವಂಶ್ಯಾನಾಂ  
ಋಷೀಣಾಮಪಿ ಭೂಯಸಾಂ  
ಅಪ್ರತಿಗ್ರಾಹಕಾಣಾಂ ಯೇ  
ಬಭೂವ ಭುವಿ ವಿಶ್ರುತಃ  
ಜಾತವೇದಾ ಇವಾರ್ಚಿಷ್ಮಾನ್  
ವೇದಾನ್ ವೇದ ವಿದಾಂ ವರಃ  
ಯೋಽಧೀತವಾನ್ ಸುಚತುರಃ  
ಚತುರೋಽಪ್ಯೇಕ ವೇದವತ್  
ಯಸ್ಯಾಭಿಚಾರನಜ್ರೇಣ  
ವಜ್ರ ಜ್ವಲನ ತೇಜಸಃ  
ಪಪಾತ ಮೂಲತಃ ಶ್ರೀಮಾನ್  
ಸುಪರ್ವಾನಂದ ಪರ್ವತಃ  
ಏಕಾಕೀ ಮಂತ್ರಶಕ್ತ್ಯಾ ಯಃ  
ಶಕ್ತ್ಯಾಶಕ್ತಿ ಧರೋಪಮಃ

ಆಜಹಾರ ನೃಚಂದ್ರಾಯ  
ಚಂದ್ರಗುಪ್ತಾಯ ಮೇದಿನೀಂ  
ನೀತಿ ಶಾಸ್ತ್ರಾಮೃತಂ ಧೀಮಾನ್  
ಅರ್ಥಶಾಸ್ತ್ರ ಮಹೋದಧೇಃ  
ಸಮುದ್ಧರೇ ನಮಸ್ತಸ್ಮೈ  
ವಿಷ್ಣುಗುಪ್ತಾಯ ವೇಧಸೇ  
ದರ್ಶನಾತ್ತಸ್ಯ ಸುದೃಶೋ  
ವಿದ್ಯಾನಾಂ ಪಾರ ದೃಶ್ವನಃ  
ರಾಜ ವಿದ್ಯಾಪ್ರಿಯತಯಾ  
ಸಂಕ್ಷಿಪ್ತ ಗ್ರಂಥಮರ್ಥವತ್

ಶ್ರೇಷ್ಠ ಋಷಿ ವಂಶದಲ್ಲಿ ಜನಿಸಿ ಸರ್ವಸಂಗ ಪರಿತ್ಯಾಗಿಯಾಗಿ ಜೀವಿಸಿ ಚತುರ್ವೇದಗಳ ಪಾರಂಗತನಾಗಿ ವೇದಾಂತಿಗಳಲ್ಲಿ ದಿಗ್ಗಜನಾಗಿ ಅಗ್ರಸ್ಥಾನವನ್ನು ಪಡೆದು, ದೇಶ ವಿದೇಶಗಳಲ್ಲಿ ಅಗ್ನಿಯಂತೆ ಪ್ರಜ್ವಲಿಸಿ ಸಿಡಿಲಿನಂತ ತನ್ನ ಸ್ವಶಕ್ತಿಯಿಂದ ಏಕಾಕಿಯಾಗಿ ದಟ್ಟದಂತಹ ನಂದರನ್ನು ಕೊಂದಾದ ಮೇಲ ಚಂದ್ರಗುಪ್ತ ಮೌರ್ಯನನ್ನು ಪಟ್ಟಕ್ಕೇರಿಸಿ ತನ್ನ ಬುದ್ಧಿ ಕೌಶಲದಿಂದ ಅವನಿಗೆ ಚಕ್ರಾಧಿ ಪತ್ಯವನ್ನು ಒದಗಿಸಿಕೊಟ್ಟು, ಅರ್ಥಶಾಸ್ತ್ರವೆಂಬ ಸಮುದ್ರವನ್ನು ಮಧಿಸಿ ರಾಜನೀತಿಯೆಂಬ ಅಮೃತವನ್ನು ತಗೆದ ದಿವ್ಯ ಪುರುಷನಾದ ಶ್ರೀವಿಷ್ಣುಗುಪ್ತನಿಗೆ ನಮೋ ನಮಃ ದಶಕುಮಾರ ಚರಿತಯನ್ನು ಬರೆದ ದಂಡಿಯೂ ಕೂಡ ಕೌಟಿಲ್ಯನ ಅರ್ಥಶಾಸ್ತ್ರವನ್ನು ಅಪಾರವಾಗಿ ಮೆಚ್ಚಿ ಹೊಗಳಿದ್ದಾನ ದಂಡಿಯಮಾತಿನಲ್ಲಿ -

ಅಧೀಷ್ವ ತಾವದ್ದಂಡ ನೀತಿಮ್  
ಇಯಮಿದಾ ನೀಮಾಚಾರ್ಯ  
ವಿಷ್ಣುಗುಪ್ತೇನ ಮೌರ್ಯಾರ್ಥೇ  
ಷಡ್ಭಿಃ ಶ್ಲೋಕ ಸಹಸ್ರೈಃ ಸಂಕ್ಷಿಪ್ತಾ  
ಸೈವೇಯಮಧೀತ್ಯ ಸಮ್ಯಕ್ ಅನುಷ್ಠೇಯ  
ಮಾನಾ ಯಥೋಕ್ತಕಾರ್ಯಕ್ಷಮೇತಿ

ರಾಜನೀತಿ ಅಭ್ಯಾಸಮಾಡಲು, ಪೂಜ್ಯ ಗುರುವರ್ಯರಾದ ವಿಷ್ಣುಗುಪ್ತರಿಂದ ಮೌರ್ಯ ರಾಜನ ಹಿತಕ್ಕಾಗಿ ಆರು ಸಾವಿರ ಶ್ಲೋಕಗಳಲ್ಲಿ ಸಂಗ್ರಹಿಸಿದ ಈ ರಾಜನೀತಿ ಶಾಸ್ತ್ರವನ್ನು ಅಧ್ಯಯನ ಮಾಡಿ ಕುಳಿತು ಅನುಷ್ಠಾನಕ್ಕೆ ಅಳವಡಿಕೊಂಡರೆ ಅದರಿಂದ ಪಡೆಯುವ ಲಾಭ - ಫಲಗಳು ಅಪಾರವಾದವು - ಎಂಬುವುವಾಗಿ ದಂಡಿಯ ಅಭಿಪ್ರಾಯ

ಬಾಣಕವಿಯು ಕೌಟಿಲ್ಯನ ಅರ್ಥಶಾಸ್ತ್ರವನ್ನು ಕುಟಿಲ ನೀತಿ ಎಂಬುವುದಾಗಿ ಕರೆದು ಪಂಚತಂತ್ರವನ್ನೂ ಅರ್ಥಶಾಸ್ತ್ರವನ್ನೂ ಬರೆದವನು ಚಾಣಕ್ಯನೆಂಬ ಬ್ರಾಹ್ಮಣನು, ಈತನೇ ವಿಷ್ಣುಗುಪ್ತನು. ಚಂದ್ರಗುಪ್ತ ಮೌರ್ಯನ ಹಿತೈಷಿ ಎಂಬುವುದಾಗಿ ತಿಳಿಸಿದ್ದಾನೆ ವಿಷ್ಣುಪುರಾಣದ ಚತುರ್ಥಾಂಶದ ೨೪ನೇ ಅಧ್ಯಾಯದಲ್ಲಿ ಕಲಿಯುಗದಲ್ಲಿ ಭೂಮಿಯನ್ನಾಳುವ ರಾಜರುಗಳನ್ನು ತಿಳಿಸುತ್ತಾ ಪರಾಶರರು-

ಮಹಾಪದ್ಮಃ ತತ್ ಪುತ್ರಾಶ್ಚೈಕಂ  
ವರ್ಷ ಶತಮವನೀಪತಯೋಃ ಭವಿಷ್ಯಂತಿ  
ತತಶ್ಚ ನವ ಚೈತಾನ್ ನಂದಾನ್  
ಕೌಟಿಲ್ಯೋ ಬ್ರಾಹ್ಮಣಸ್ಸಮುದ್ಧರಿಷ್ಯತಿ  
ತೇಷಾಮಭಾವೇ ಮೌರ್ಯಾಃ  
ಪೃಥಿವೀಂ ಭೋಕ್ಷ್ಯಂತಿ  
ಕೌಟಿಲ್ಯವಿವ ಚಂದ್ರಗುಪ್ತ  
ಮುತ್ಪನ್ನಂ ರಾಜ್ಯಾಭಿಷೇಕ್ಷ್ಯತಿ

ಮಹಾ ಪದ್ಮನೂ ಆತನ ಪುತ್ರರೂ ಒಂದು ನೂರು ವರ್ಷ ರಾಜ್ಯವನ್ನು ಆಳುವರು ಮಹಾಪದ್ಮ ಹಾಗೂ ಎಂಟುಮಂದಿ ನಂದರನ್ನು ಕೌಟಿಲ್ಯ ಎಂಬ ಬ್ರಾಹ್ಮಣನು ಧ್ವಂಸಮಾಡಿ ಆ ಬ್ರಾಹ್ಮಣನು ನಂದನ ಹೆಂಡತಿ ಮುರಾ ಎಂಬುವಳಲ್ಲಿ ಹುಟ್ಟಿದ ಚಂದ್ರಗುಪ್ತನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡುವನು ಎಂಬುವ ಉಲ್ಲೇಖನವಿದೆ ಚಾಣಕ್ಯನ ಚರಿತೆಯನ್ನು ವಿಶಾಖದತ್ತನ ಮುದ್ರಾರಾಕ್ಷಸ ಎಂಬುವ ನಾಟಕದಲ್ಲಿ ಸವಿಸ್ತಾರವಾಗಿ ತಿಳಿಯಬಹುದು ಚಂದ್ರಗುಪ್ತನ ರಾಜ್ಯಭಾರ ಕ್ರಿ ಪೂ ೩೧೦ ಕ್ರಿ ಪೂ ೩೦೫ ರಲ್ಲಿ ಗ್ರೀಕ್ ರಾಯಬಾರಿ ಸೆಲ್ಯೂಕಸ್ನಿನೊಡನ ಚಂದ್ರಗುಪ್ತನ ಒಪ್ಪಂದವನ್ನು ಇತಿಹಾಸ ತಿಳಿಸುತ್ತ

## ಅರ್ಥಶಾಸ್ತ್ರದ ವಿವರಣೆ

ಕೌಟಿಲ್ಯನು ಶಾಸ್ತ್ರಗಳನ್ನು ಪ್ರಾಚೀನರ ಸಿದ್ಧಾಂತದಂತಯೇ ನಾಲ್ಕು ಭಾಗಗಳಾದ ಕ್ರಮಾ - ಅನ್ವೀ

## ತಿ. ತಿ. ದೇವಸ್ಥಾನಗಳು - ತಿರುಪತಿ.

# ಕಲ್ಯಾಣ ಮಂಟಪಗಳ ಬಾಡಿಗೆ ಪರಿಷ್ಕರಣ

ಬೇರೆ ಬೇರೆ ಕಡೆಗಳಲ್ಲಿರುವ ತಿ ತಿ ದೇ ಕಲ್ಯಾಣ ಮಂಟಪಗಳ ದಿನಂಪ್ರತಿ ಬಾಡಿಗೆಯನ್ನು 1-6-99 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಲಾಗಿದೆ ಮಿಕ್ಕ ಎಲ್ಲ ಬಾಡಿಗೆಯ ನಿಯಮಗಳೂ ಎಂದಿನಂತೆಯೇ ಇರುವುವು. ಈ ಪರಿಷ್ಕೃತ ದರಗಳಲ್ಲಿ ಜನರೇಟರ್ ಬಾಡಿಗೆಯೂ ಸೇರಿದೆಯಾಗಿ ಜನರೇಟರಿನ ಬಾಡಿಗೆಯನ್ನು ಪ್ರತ್ಯೇಕವಾಗಿ ನೀಡಬೇಕಾಗಿರುವುದಿಲ್ಲ ಪರಿಷ್ಕೃತ ಬಾಡಿಗೆ ದರಗಳನ್ನು ಕೆಳಗೆ ನೀಡಲಾಗಿದೆ

| ಸಂ | ಕಲ್ಯಾಣಮಂಟಪದ ಹೆಸರು - ಸ್ಥಳ | ವಿಭಾಗಗಳು | ಪ್ರತಿ ವಿಭಾಗದ ದಿನಂಪ್ರತಿ ಬಾಡಿಗೆ |
|---|---|---|---|
| 1 | ಶ್ರೀನಿವಾಸ ಕಲ್ಯಾಣಮಂಟಪ, ತಿರುಚಾನೂರು ರಸ್ತೆ, ತಿರುಪತಿ | 1, 2, | ರೂ 5000/- |
| | | 3, 4, | ರೂ 6000/- |
| 2 | ಶ್ರೀ ಪದ್ಮಾವತೀ ಕಲ್ಯಾಣಮಂಟಪ, ತಿರುಚಾನೂರು ರಸ್ತೆ, ತಿರುಪತಿ | 1 ರಿಂದ 3 | ರೂ 6000/- |
| 3 | ತೋಳಪ್ಪ ಉದ್ಯಾನವನದ ಕಲ್ಯಾಣಮಂಟಪಗಳು, ತಿರುಚಾನೂರು | 1 ರಿಂದ 8 | ರೂ 1000/- |
| 4 | ಬಯಲು ಕಲ್ಯಾಣಮಂಟಪ - ತಿರುಚಾನೂರು | 1 | ರೂ 800/- |
| 5 | ಶ್ರೀ ಪದ್ಮಾವತೀ ಕಲ್ಯಾಣಮಂಟಪಗಳು - ಪೋಲೀಸ್ ಸ್ಟೇಷನ್‌ಬಳಿ, ತಿರುಚಾನೂರು | 1 ರಿಂದ 4 | ರೂ 800/- |
| 6 | ಸೀತಾರಾಮ ಕಲ್ಯಾಣಮಂಟಪ, ತಿರುಪತಿ | 1 | ರೂ 1200/- |
| 7 | ಶ್ರೀ ಗೋವಿಂದರಾಜ ಕಲ್ಯಾಣಮಂಟಪ, II ಹೊಸ ಸತ್ರ, ತಿರುಪತಿ | ನೆಲ ಅಂತಸ್ತು | ರೂ 1500/- |
| | | ಮೊದಲ ಅಂತಸ್ತು | ರೂ 500/- |
| 8 | ಶ್ರೀ ಕೋದಂಡರಾಮ ಕಲ್ಯಾಣಮಂಟಪ, III ಹೊಸ ಸತ್ರ, ತಿರುಪತಿ | | ರೂ 800/- |
| 9 | ಶ್ರೀನಿವಾಸಮಂಗಾಪುರಂ ಕಲ್ಯಾಣಮಂಟಪ, ಶ್ರೀನಿವಾಸಮಂಗಾಪುರ | | ರೂ 1000/- |
| 10 | ಜಿಲ್ಲಾಕೇಂದ್ರಗಳಲ್ಲಿನ ಕಲ್ಯಾಣಮಂಟಪಗಳು | | ರೂ 6000/- |
| 11 | ನಗರಾಡಳಿತ ಪ್ರದೇಶದ ಕಲ್ಯಾಣಮಂಟಪಗಳು | | ರೂ 8000/- |
| 12 | ಬೆಂಗಳೂರಿನ ಕಲ್ಯಾಣಮಂಟಪ - ಬೆಂಗಳೂರು | | ರೂ 10000/- |
| 13 | ಭುವನೇಶ್ವರದ ಕಲ್ಯಾಣಮಂಟಪ | | ರೂ 6000/- |

ಸಾರ್ವಜನಿಕರು ಈ ಬದಲಾವಣೆಗಳನ್ನು ಗಮನಿಸಬೇಕೆಂದು ಕೋರಲಾಗಿದೆ

**ತಿ. ತಿ. ದೇ.**

ಕ್ಷಿಕೀ, ವಾರ್ತ ಮತ್ತು ದಂಡನೀತಿ ಭಾಗಗಳಾಗಿ ವಿಂಗಡಿಸುವುದು ಸೂಕ್ತವೆಂದು ತಿಳಿಸುತ್ತಾ, ತತ್ವಶಾಸ್ತ್ರವು ಅಂದರೆ ಅನ್ವೀಕ್ಷಿಕೀ ಪ್ರಜೆಗಳ ಮನುಷ್ಯರ ಕರ್ತವ್ಯ ಅದಕ್ಕೆ ಸಹಕರಿಸುವ ಕಾರ್ಯಕಾರಣಗಳ ವಿವರಣೆಕ್ಲೇಶಗಳಿಗೆ ಒಳಗಾಗದಂತೆ ಮನುಷ್ಯ ತನ್ನ ಮನಸ್ಸನ್ನು ನಿಗ್ರಹಿಸುವ ರೀತಿ, ನೀತಿಗಳ ವಿವರಣೆ ಕೊಡುತ್ತಾನೆ ವೇದಗಳ ಪ್ರಾಮಾಣಿಕತೆ ದರ್ಮಾದರ್ಮಗಳ ಉಪಯೋಗ ಆಚರಣೆ ಲಾಭ, ಫಲ ತಿಳಿಸಿ, ವರ್ಣಾಶ್ರಮ ಧರ್ಮಗಳ ಉಪಯೋಗ, ಸಮಾಜಕ್ಕೆ ಅದರಿಂದ ಆಗುವ ಉಪಕಾರ, ಕೃಷಿ, ಪಶುಪಾಲನೆಗಳಿಂದ ದೇಶದ ಸಂಪತ್ತಿನ ಅಭಿವೃದ್ಧಿ - ಇದೇವಾರ್ತಾ ನಾಲ್ಕನೆಯ ದಂಡನೀತಿಯಲ್ಲಿ ರಾಷ್ಟ್ರದ ಅಭಿವೃದ್ಧಿ, ಮಂತ್ರಿ, ರಾಜ್ಯಭಾರ ಪ್ರಜೆಗಳ ಕ್ಷೇಮ ಸೈನ್ಯ ಕೋಶ ಮತ್ತು ರಾಜನ ನೀತಿ - ಇವುಗಳ ಪ್ರಸಂಗಗಳು, ಪ್ರಜೆಗಳ ಸುಖವನ್ನು ಕಾಪಾಡುವುದು, ಅವರ ಹಿತವನ್ನು ಕಾಪಾಡುವುದು, ಪ್ರಜೆಗಳ ಸುಖ ತನ್ನ ಸುಖ ಅವರ ಹಿತವೇ ತನ್ನ ಹಿತವೆಂದು ರಾಜ ತಿಳಿದಿರಬೇಕೆಂಬುದು ಕೌಟಿಲ್ಯನ ಆದೇಶ

ಪ್ರಜಾಸುಖೇ ಸುಖಂ ರಾಜ್ಞಃ
ಪ್ರಜಾನಾಂ ಚ ಹೀತೇ ಹಿತಂ
ನಾತ್ಮಪ್ರಿಯಂ ಹಿತಂ ರಾಜ್ಞಃ
ಪ್ರಜಾನಾಂತು ಪ್ರಿಯಂ ಹಿತಂ

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಚಾಣಕ್ಯ ಚತುರ್ವಿಧ ಪುರುಷಾರ್ಥಗಳಲ್ಲಿ ಅರ್ಥವನ್ನೇ ಪ್ರಾಧಾನ್ಯವಾಗಿಟ್ಟುಕೊಂಡು ಧರ್ಮ ಕಾಮಗಳನ್ನು ಸಂಕ್ಷೇಪವಾಗಿ ಚರ್ಚಿಸಿದ್ದಾನೆ ಲೌಕಿಕ ಮತ್ತು ಪಾರಮಾರ್ಥಿಕ

ವಿಷಯಗಳನ್ನು ಯುಗದರ್ಮಕ್ಕೆ ತಕ್ಕಂತೆ ವಿಮರ್ಶೆ ಮಾಡಿದ್ದಾನೆ ರಾಜನು ಪ್ರಜೆಗಳ ಹಿತಾಕಾಂಕ್ಷಿ ಯನ್ನು ಗಮನದಲ್ಲಿಟ್ಟುಕೊಂಡು ಒಳ್ಳೆಯ ಕೆಲಸ ಗಳನ್ನು ಮಾಡಬೇಕು ಇದೇ ಅವನ ವ್ರತ ಇದೇ ಅವನ ಯಾಗ ಎಲ್ಲರ ವಿಷಯದಲ್ಲಿ ನಿಷ್ಪಕ್ಷಪಾತ ತೋರಣೆ ಅವನ ನೀತಿ

ರಾಜ್ಞೋಹಿ ವ್ರತಮುತ್ಥಾನಂ
ಯಜ್ಞಃ ಕಾರ್ಯಾನು ಶಾಸನಂ
ದಕ್ಷಿಣಾ ವೃತ್ತಿ ಸಾಮ್ಯಂ ಚ
ದೀಕ್ಷಿತ ಸ್ಯಾಭಿಷೇಚನಂ

ದರ್ಮಪರಿಪಾಲನೆ ಅವನ ಗುರಿ ರಾಜನೀತಿ ಸಮಾಜದಲ್ಲಿ ಬಹುಮುಖ್ಯ ಪಾತ್ರ ಅರ್ದಶಾಸ್ತ್ರ ವನ್ನು ರಾಜನೀತಿ ಶಾಸ್ತ್ರದಿಂದ ಬೇರೆ ಮಾಡಲಾ ಯಿತು ಕೃಷಿ, ಗೋರಕ್ಷಣೆ, ವ್ಯಾಪಾರ ಮೂರೂ ಸೇರಿ ವಾರ್ತಾ ಎಂಬುವುದಾಗಿ ವಿಬಾಗಮಾಡಿದ್ದಾನೆ ಕೌಟಿಲ್ಯ ಮಹಾಬಾರತದ ಶಾಂತಿ ಪರ್ವದಲ್ಲಿ ತಿಳಿ ಸಿರುವ-

"ವಾರ್ತಾಮೂಲೋಹ್ಯಯಂ ಲೋಕಾಃ
ಸ್ತ್ರಯ್ಯಾವೈ ದಾರ್ಯತೀ ಸದಾ"

ಎಂಬುವ ನೀತಿಯನ್ನೇ ಕೌಟಿಲ್ಯನೂ ಕೂಡ ಈ ಲೋಕವು ವಾರ್ತೆಯನ್ನು ಆಶ್ರಯಿಸಿದರೆ ಸುಖಪಡುತ್ತದ ಎಂಬುವುದಾಗಿ ತಿಳಿಸುವಾಗ "ವಾರ್ತಾಯಾಂ ಸಂಶ್ರಿತಸ್ತಾತ ಲೋಕೋಯಂ ಸುಖಮೇದತೇ" ಎಂಬುವುದಾಗಿ ಅರ್ದಶಾಸ್ತ್ರ ಮತ್ತು ವಾರ್ತಾ ಬೇರೆ ಬೇರೆಯೆಂದು ಸ್ಪಷ್ಟಪಡಿಸಿ ದ್ದಾನೆ

ಕೌ ಟಿಲ್ಯನು ತನ್ನ ಅರ್ದಶಾಸ್ತ್ರದಲ್ಲಿ ತನ್ನ ಹಿಂದಿನ ಪಂಡಿತರಾದ ಕಾಣಪದಂತ, ಪಿಶುನ, ಭಾರ ದ್ವಾಜ, ವಾತವ್ಯಾಧಿ, ವಿಶಾಲಾಕ್ಷ ಅಂಬೀಯ, ಔಶ ನಶ, ಪಾರಾಶರ, ಬಾರ್ಹಸ್ಪತ ಮತ್ತು ಮಾನವ ಇವರ ಶಾಸ್ತ್ರ ಪ್ರಸ್ಥಾನಗಳನ್ನು ಉಲ್ಲೇಖಿಸಿದ್ದಾನ, ಇದೊಂದು ಕೌಟಿಲ್ಯನ ವಿಶಿಷ್ಟತೆ ಇದರಿಂದ ಕೌಟಿ ಲ್ಯನ ಅರ್ದಶಾಸ್ತ್ರವು ಎಲ್ಲಾ ಕಾಲಕ್ಕೂ ಶತಮಾನ ಗಳಿಂದ ಶಾಶ್ವತವಾದ ಹಿರಿಮೆಯನ್ನು ಹೊಂದಿದ ೧೯೦೯ ರಲ್ಲಿ ಮೈಸೂರಿನ ಡಾ|| ಆರ್ ಶಾಮಶಾಸ್ತ್ರಿ ಗಳು, ಡಾ|| ಫ್ಲೀಟ್‌ರವರಿಂದ ಸಂಸ್ಕೃತದಲ್ಲಿ ಪ್ರಕಟಿತ ವಾದ ಗ್ರಂಥವನ್ನು ೧೯೧೫ ರಲ್ಲಿ ಇಂಗ್ಲೀಷ್ ಅನು ವಾದವನ್ನು ಮಾಡಿ ಉಪಕಾರಮಾಡಿದ್ದಾರ ಈ ಗ್ರಂಥದ ೨ ನೇ ಆವೃತ್ತಿ ೧೯೨೮ ರಲ್ಲಿ ಹೊರಬಂತು ಸಂಸ್ಕೃತ ಗ್ರಂದಕ್ಕೆ ನಯ ಚಂದ್ರಿಕಾ ಎಂಬ ವ್ಯಾಖ್ಯಾ ನವ ಮಾಧವ ಯಜ್ವನ್ ಪಂಡಿತರೂ, ಶ್ರೀ ಮೂಲಾ ಎಂಬ ವ್ಯಾಖ್ಯಾನವನ್ನು ಮಹಾಮಹೋಪಾದ್ಯಾಯ ಟಿ ಗಣಪತಿ ಶಾಸ್ತ್ರಿಗಳು ೧೯೨೪ ರಲ್ಲಿ ಪ್ರಕಟಗೊ ಳಿಸಿದರು ೧೯೬೩ ರಲ್ಲಿ ಮುಂಬಯಿ ವಿಶ್ವವಿದ್ಯಾ ಲಯದ ಮೂಲಕ ಪ್ರೊ ಆರ್ ಪಿ ಕಾಂಗ್ಲೆ ರವರು ಪ್ರಕಟಿಸಿದ ಗ್ರಂಥಗಳು ಎರಡು ಇಂಗ್ಲೀಷ್ ಅನುವಾದ ಟಿಪ್ಪಣಿಗಳೊಡನೆ ಜೆ ಜೆ ಮೇಯ ರ್‌ರವರ ಜರ್ಮನ್ ಬಾಷಾಂತರ ಪ್ರಸಿದ್ಧವಾದ ವ್ಯಾಖ್ಯಾನ ಪ್ರೊ ವಿ ಐ ಕಲ್ಯಾನೋವ್‌ರವರ ರಷ್ಯನ್ ಅನುವಾದ ಇದಲ್ಲದೇ ದೇಶೀಯ ಭಾಷೆ ಗಳಾದ ತೆಲುಗು, ಹಿಂದೀ, ಬಂಗಾಳೀ, ಗುಜರಾತೀ, ತಮಿಳು, ಕನ್ನಡ ಬಾಷೆಗಳಲ್ಲಿ ಮತ್ತು ಮರಾಠಿಯಲ್ಲಿ ಜೆ ಎಸ್ ಕರಂದೀಕರ್‌ರವರ ಭಾಷಾಂತರಗಳಿವೆ ಕೌಟಿಲ್ಯನ ಅರ್ದಶಾಸ್ತ್ರದ ಬಗ್ಗೆ ಸಾವಿರಾರು ಲೇಖನ ಗಳು ಅಧ್ಯಯನದ ಟಿಪ್ಪಣಿಗಳು ದೇಶೀಯ, ಆಂಗ್ಲ ಭಾಷೆಗಳಲ್ಲಿ ಪ್ರಕಟನೆಗೊಂಡಿವೆ ಕಾರಣ, ಅರ್ದ ಶಾಸ್ತ್ರದಲ್ಲಿ ರಾಜನೀತಿಯನ್ನೂ ದರ್ಮಶಾಸ್ತ್ರವನ್ನೂ ಪ್ರತಿಪಾದಿಸಿರುವುದರಿಂದ ಮತ್ತು ಅರ್ಥಶಾಸ್ತ್ರವು ಅದರ್ವವೇದದ ಒಂದು ಉಪವೇದವಾಗಿರುವುದ ರಿಂದ ಕೌಟಿಲ್ಯನು ತನ್ನ ಅರ್ದಶಾಸ್ತ್ರದ ಉದ್ದೇಶವನ್ನು ಹೇಳುವಾಗ-

ತಸ್ಯಾಃ ಪೃಥಿವ್ಯಾ ಲಾಬ ಪಾಲನೋಪಾಯಃ
ಶಾಸ್ತ್ರಮರ್ಥ ಶಾಸ್ತ್ರಮಿತಿ

(ರಾಜ್ಯಲಾಭ, ಮತ್ತು ರಾಜ್ಯ ಸಂರಕ್ಷಣೆ ಇವುಗಳ ಉಪಾಯವನ್ನು ತಿಳಿಸುವ ಶಾಸ್ತ್ರವೇ ಅರ್ದಶಾಸ್ತ್ರ) ಆದರೂ ಹಿಂದಿನಿಂದ ಧರ್ಮಶಾಸ್ತ್ರಕ್ಕೂ ಅರ್ಥಶಾ ಸ್ತ್ರಕ್ಕೂ ವಿರೋದ ಕಂಡುಬಂದಾಗ ಧರ್ಮಶಾಸ್ತ್ರವನ್ನೇ ಅವಲಂಬಿಸಬೇಕೆಂದು ವ್ಯಾಸರ ಯಾಜ್ಞವಲ್ಕರ, ಪರಾಶರರ, ನಾರದರ ಮತಗಳು (ಯತ್ರ ವಿಪ್ರತಿ ಪತ್ತಿಃ ಸ್ಯಾದ್ಧರ್ಮ ಶಾಸ್ತ್ರಾರ್ಥಶಾಸ್ತ್ರಯೋಃ, ಅರ್ಥಶಾ ಸ್ತ್ರೋಕ್ತ ಮುತ್ಸೃಜ್ಯ ಧರ್ಮಶಾಸ್ತ್ರೋಕ್ತ ಮಾಚರೇತ್)

ಕೌಟಿಲ್ಯನ ಅರ್ದಶಾಸ್ತ್ರದ ವಿಷಯ ವಸ್ತುಗಳು ಹಲವು ವಿದ್ಯೆಯ ಉಪಯೋಗಗಳು, ದೂತರ ಕರ್ತವ್ಯ, ರಾಜರ ಕರ್ತವ್ಯಗಳು, ಗ್ರಾಮಗಳ ರಚನೆ, ಕಂದಾಯ ಆದಾಯಗಳ ಪರಿಚಯ, ಪುರಸಭೆ, ನಗ ರಾದ್ಯಕ್ಷ, ರೀತಿನೀತಿಗಳು, ನಿಯಮಗಳು, ವಿವಾಹ ಪ್ರಕರಣಗಳು, ಕಾರ್ಮಿಕರ ನಿಯಮಗಳು, ಅಪ ರಾಧಗಳು - ಅವರಿಗೆ ಶಿಕ್ಷೆ, ವರ್ತಕರ ಕರ್ತವ್ಯ ದೇಶದ ರಕ್ಷಣೆ, ರಾಜ್ಯ ಪ್ರಧಾನಿಕರ್ತವ್ಯಗಳು ಆರು ರಾಜನೀತಿಗಳ ವಿವರಣೆಗಳು, ಯುದ್ಧ ಗೂಡಚಾ ರರ ಕರ್ತವ್ಯಗಳು ವಿವಿಧ ಇಲಾಖೆಗಳ ಕರ್ತವ್ಯ ಗಳು - ಇತ್ಯಾದಿ ಅರ್ದಶಾಸ್ತ್ರದಲ್ಲಿ ಕೌಟಿಲ್ಯನು ವಿವ ರಿಸಿದ್ದಾನೆ ಸಮಾಜ ಕಲ್ಯಾಣವನ್ನು ಗುರಿಯಿಟ್ಟು ಕೊಂಡು ಸ್ತ್ರೀಯರ, ಬಾಲವೃದ್ಧ ಅಬಲೆಯರ ಸಂರ ಕ್ಷಣೆ ಬಗ್ಗೆ ತಪ್ಪಿದ್ದಲ್ಲಿ ಆಗುವ ದಂಡ ಶಿಕ್ಷೆಗಳನ್ನು ವಿವರಿಸಿದ್ದಾನೆ ಅರ್ಥಶಾಸ್ತ್ರವೆಂಬ ಮಹಾಸಾಗರ ದಿಂದ ನೀತಿ ಶಾಸ್ತ್ರವೆಂಬ ಅಮೃತದಿಂದ ನವನೀತ ವನ್ನು ತೆಗೆದ ಮಹಾಪುರುಷನು ಕೌಟಿಲ್ಯನು ಎಂಬು ವುದಾಗಿ ಕಾಮಂದಕನ ಮಾತು ನೂರುಪಾಲು ಸತ್ಯ ತಂತ್ರಾಖ್ಯಾಯಿಕಾ ಎಂಬ ಗ್ರಂದದಲ್ಲಿ 'ಚಾಣಕ್ಯಾಯ ಚ ಮಹತೇ ನಮೋಽಸ್ತು ನೃಪ ಶಾಸ್ತ್ರ ಕರ್ತೃಭ್ಯಃ' ಎಂಬುವುದಾಗಿ ಮನು, ವಾಚಸ್ಪತಿ, ಶುಕ, ಪರಾಶರ ಸುತ, ಜೊತೆಯಲ್ಲಿ ಚಾಣಕ್ಯನಿಗೆ ನಮಸ್ಕಾರ ಪೂರ್ವ ಕವಾಗಿ ಮರ್ಯಾದೆಯನ್ನು ತೋರಿಸಿದ್ದಾನೆ ಕರ್ತೃ ಅರ್ದಶಾಸ್ತ್ರದ ಜೊತೆ ಕೌಟಿಲ್ಯನು ಭಿನ್ನ ಭಿನ್ನ ರಾಜ ನೀತಿಗಳ ಶಾಸ್ತ್ರಗಳನ್ನು ಕಂಡು ದೇಸತ್ತು ತಾನೇ ಸ್ವತಃ ಅರ್ದಶಾಸ್ತ್ರಗಳು ಮತ್ತು ಸೂತ್ರಕ್ಕೆ ಭಾಷ್ಯವನ್ನು ಬರೆದನೆಂದು ಅರ್ದಶಾಸ್ತ್ರದಲ್ಲೇ ಉಲ್ಲೇಖನವಿದೆ ಹೀಗೆಂದು-

ಸರ್ವಶಾಸ್ತ್ರಾಣ್ಯನುಕ್ರಮ್ಯ
ಪ್ರಯೋಗಮುಪಲಭ್ಯ ಚ
ಕೌಟಿಲ್ಯೇನ ನರಾಂದ್ರಾರ್ಥೇ
ಶಾಸನಸ್ಯ ವಿಧಿಃ ಕೃತಃ

ಕೌಟಿಲ್ಯನ ಪ್ರಕಾರ ರಾಜನು ಶ್ರೋತ್ರಿಯರು ರಚಿ ಸಿದ ನೀತಿ ಕಾನೂನುಗಳನ್ನು ಕಾಪಾಡಿ ತೀರ್ಪುಕೊ ಡುವ ಅದಿಕಾರ ರಾಜನಿಗೆ ಉಂಟು ತೀರ್ಪುಕೊ ಡುವುದಕ್ಕೆ ಮುಂಚೆ ಶ್ರೇಷ್ಠಮಂತ್ರಿಗಳ ನೀತಿ ಶಾಸ್ತ್ರ ಕಾರರನ್ನು ವಿಚಾರಿಸಿ ಅವರ ಸಲಹೆಯಂತೆ ತೀರ್ಪು ಕೊಡಬೇಕೆಂದು ಹೇಳಿದ್ದಾನೆ

ರಾಜರಿಗೆ ಚಾಣಕ್ಯ ನೀತಿ ಶಾಸ್ತ್ರ ಸಾಮಾಜಿಕ ವ್ಯವ ಸ್ಥೆಗೆ ಪೂರಕ ಪ್ರಜೆಗಳ ರಕ್ಷಣೆ ರಾಜನ ಕರ್ತವ್ಯ ಕ್ಷಾಮ ಮೊದಲಾದ ಹಾವಳಿಗಳಿಂದ ರಕ್ಷಿಸುವುದು ಅವನ ಕರ್ತವ್ಯ ಕಾನೂನು ರಚನೆ, ನ್ಯಾಯವ್ಯ ವಸ್ಥೆ ಒಳ್ಳೆಯ ಮಂತ್ರಿಗಳಿಂದ ಸಾಧ್ಯವೆಂದು ಹೇಳಿ, ಯಾವ ಕಾರ್ಯವನ್ನು ಮಾಡಬೇಕಾದರೂ ಮಂತ್ರಿ ಗಳ ಅಭಿಪ್ರಾಯಮುಖ್ಯ ಎಂಬುವುದಾಗಿ ಹೇಳು ವಾಗ ಕೌಟಿಲ್ಯನು "ಮಂತ್ರಪೂರ್ವಃ ಸರ್ವಾರಂಭಃ" ಎಂಬುವುದಾಗಿ ತಿಳಿಸಿದ್ದಾನೆ ಅಮಾತ್ಯರ ಸಮ್ಮತಿ ಮುಖ್ಯ ರಾಜನು ಭೂಮಿಯ ಹಕ್ಕುದಾರ ಆದರೆ

ತನ್ನ ಮನ ಬಂದಂತೆ ಜನರ ಮೇಲೆ ಅಧಿಕಾರ ಪ್ರದರ್ಶನ ಮಾಡುವ ಹಾಗಿಲ್ಲ - ಇದನ್ನೇ ಕೌಟಿಲ್ಯನು-

ರಾಜಾ ಭೂಮೇಃ ಪತಿರ್ದೃಷ್ಟೋ
ಶಾಸ್ತ್ರಜ್ಞೈ ರುದಕಸ್ಯ ಚ
ತಾಭ್ಯಾಮನ್ಯತ್ತು ಯದ್ದ್ರವ್ಯಂ
ತತ್ರ ಸ್ವಾಮ್ಯಂ ಕುಟುಂಬಿನಾಂ

(ರಾಜನು ಭೂಮಿ, ನೀರು ಇವುಗಳ ಒಡೆಯ ಮಿಕ್ಕೆಲ್ಲಾ ಸಂಪತ್ತಿಗಳಿಗೆ ರಾಜನ ಜೊತೆ ಜನರಿಗೂ ಸರಿಸಮಾನವಾದ ಹಕ್ಕುಗಳು ಇವೆ ) ರಾಜ್ಯಾಡಳಿತಕ್ಕೆ ಕೋಶ, ರಾಜಭಂಡಾರ ಬಹುಮುಖ್ಯ ಕೋಶವಿಲ್ಲದಿದ್ದರೆ ಅಧಿಕಾರಿಗಳ ವೇತನ, ಸೈನ್ಯದ ಖರ್ಚು, ದುರ್ಗದ ರಕ್ಷಣೆ, ಧರ್ಮ ದಾನಾದಿಗಳಿಗೆ ಹಣವೇ ಮುಖ್ಯ ಆದರಿಂದಲೇ ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ "ಕೋಶಪೂರ್ವಾಃ ಸಮಾರಂಭಾಃ ತಸ್ಮಾತ್ ಕೋಶಮವೇಕ್ಷೇತ" ಎಂಬುವುದಾಗಿ ತಿಳಿಸಿದ್ದಾನೆ. ಕೋಶ ಸಂಪತ್ತು ತುಂಬ ದೇಕಾದರೆ ರಾಜನು ನ್ಯಾಯವಾಗಿ ತೆರಿಗೆ ಮುಖಾಂತರ ಧಾನ್ಯ ಬಂಗಾರ, ಬೆಳ್ಳಿ, ಅಮೂಲ್ಯ ಹರಳುಗಳಿಂದ ಕೋಶವನ್ನು ತುಂಬ ದೇಕೆಂದೂ ಕೋಶಾಧ್ಯಕ್ಷನು ಕೋಶ ವೃದ್ಧಿಯನ್ನು ಭೂಮಿ ಅಭಿವೃದ್ಧಿ ಕಾರ್ಯಗಳಿಂದ, ನಂಬಿಗಸ್ಥರಾದ ನೌಕರರಿಗೆ ಉತ್ತೇಜನವನ್ನು ನೀಡುವುದರಿಂದಲೂ, ಕಳ್ಳಕಾಕರನ್ನು ಶಿಕ್ಷಿಸುವುದರಿಂದಲೂ, ನೌಕರರನ್ನು ಶಿಸ್ತಿನಿಂದ ನಿಯಂತ್ರಿಸುವುದರಿಂದಲೂ, ಹೆಚ್ಚಿಗೆ ಬೆಳೆಗಳನ್ನು ಫಸಲನ್ನು ಬೆಳೆಸುವುದರಿಂದಲೂ, ರಾಜ್ಯವನ್ನು ಕ್ಷಾಮ, ಬೆಂಕಿಗಳಿಂದ ಕಾಪಾಡುವುದರಿಂದಲೂ, ನ್ಯಾಯವಾದ ಕರ ವಸೂಲಿ ಮಾಡುವುದರಿಂದಲೂ ಕೋಶವನ್ನು ಅಭಿವೃದ್ಧಿಪಡಿಸಬಹುದು "ಕೋಶಾಭಿ ಸಂಹರಣ" ಎಂಬುವ ಐದನೆಯ ಅಧಿಕರಣದಲ್ಲಿ ಸ್ಪಷ್ಟಪಡಿಸಿದ್ದಾನೆ ಕೋಶದ ನಷ್ಟಕ್ಕೆ ಸೋರುವಿಕೆಗೆ ಕೌಟಿಲ್ಯನು ಎಂಟು ಕಾರಣಗಳನ್ನು ಕೊಡುತ್ತಾನೆ (೧) ಪ್ರತಿಬಂಧ ತೆರಿಗೆಗಳನ್ನು ಸರಿಯಾಗಿ ವಸೂಲಿಮಾಡದಿರುವಿಕೆ ಅಧಿಕಾರಿಯು ಲಾಭವನ್ನು ಕೋಶಕ್ಕೆ ಪಾವತಿ ಮಾಡದಿರುವಿಕೆ ಇದರ ತಪ್ಪಿಗೆ ಅಧಿಕಾರಿಗೆ ನಷ್ಟದ ೧೦ ರಷ್ಟು ದಂಡವಿಧಿಸಬೇಕೆಂದು ಕೌಟಿಲ್ಯನ ಶಾಸನ (೨) ಬಡ್ಡಿಗೆ ಹಣವನ್ನು ನೀಡಿ ವ್ಯಾಪಾರಸ್ಥರಿಂದ ಆ ಹಣದ ಬಡ್ಡಿ ವಸೂಲಿಯನ್ನು ವ್ಯವಹಾರವೆಂದು ಕರೆದು, ಬಡ್ಡಿ ವಸೂಲಿ ವ್ಯವಹಾರದಲ್ಲಿ ಕರ್ತವ್ಯ ಲೋಪಕ್ಕೆ ಅಧಿಕಾರಿಯು ಬಡ್ಡಿಯ ಎರಡರಷ್ಟು ದಂಡತರಬೇಕೆಂಬ ಕಾನೂನು (೩) ಅವಸ್ತಾರ ಎಂದರೆ ನಿಗದಿ ಕಾಲಕ್ಕೆ ಕರವಸೂಲಿ ಮಾಡದಿದ್ದರೆ ಐದು ಪಟ್ಟು ತೆರಿಗೆ ಮೊತ್ತ ದಂಡ (೪) ನಿಗದಿತ ಗುರಿ ಮೊತ್ತವನ್ನು ಮುಟ್ಟದೆ ಇದ್ದ ಪಕ್ಷದಲ್ಲಿ ಅಧಿಕಾರಿಯು ಪರಿಹರಣದ ತಪ್ಪಿಗೆ ನಷ್ಟದ ನಾಲ್ಕು ಪಟ್ಟು ದಂಡ ತೆರಬೇಕು (೫) ದೊರೆಯ ಸೊತ್ತು ಅಥವಾ ರಾಜ್ಯಕ್ಕೆ ಸೇರಿದ ಸರಕಾರದ ಸೊತ್ತು ಸಾಮಾನು ವಸ್ತುಗಳ ಸ್ವಂತಕ್ಕೆ ದುರುಪಯೋಗದ ಉಪಭೋಗಕ್ಕೆ ಸಾಮಾನ್ಯ ಶಿಕ್ಷೆ ದೊರೆಗೆ ಸೇರಿದ್ದು (೬) ಸರಕಾರದ ಬೆಲೆಬಾಳುವ ಸೊತ್ತನ್ನು ಕಡಿಮೆ ಬೆಲಬಾಳುವ ಸೊತ್ತನ್ನು ತಂದಿರಿಸುವ ಮೋಸಕ್ಕೆ ಉಪಭೋಗಕ್ಕೆ ಸಿಗುವ ಶಿಕ್ಷೆಯು ಇದಕ್ಕೆ ಪರಿವರ್ತನ ಶಿಕ್ಷೆಯೆಂದು, (೭) ವಸೂಲಿ ಮಾಡಿದ ಕರ ಅಥವಾ ಕಂದಾಯವನ್ನು ಸರಿಯಾಗಿ ಕಟ್ಟದೆ ಮೋಸಮಾಡಿದರೆ ಇಂತಹ ಅಪಹಾರ ಶಿಕ್ಷೆ ಹನ್ನೆರಡು ಪಟ್ಟು ಹಣವನ್ನು ನಷ್ಟದ ಮೊತ್ತಕ್ಕಿಂತ ಹೆಚ್ಚಿಗೆ ದಂಡ ತೆರಬೇಕು ಲಂಚವನ್ನು ತಗದುಕೊಳ್ಳುವ ಅಧಿಕಾರಿಗೆ ಮರಣದಂತ ಶಿಕ್ಷೆ ಇದು ಬಹಳ ಕ್ರೂರವಾದ ಶಿಕ್ಷೆಯಾಗಿತ್ತು

## ಚಾಣಕ್ಯನ ನೀತಿಶಾಸ್ತ್ರ

ಕೌಟಿಲ್ಯನು ಬರೆದ ನೀತಿಶಾಸ್ತ್ರಗಳು ಹಲವು ಚಾಣಕ್ಯನೀತಿ ಅಥವಾ ವೃದ್ಧ ಚಾಣಕ್ಯ ಎಂಬ ಸುಭಾಷಿತ ಗ್ರಂಥ ಬಹುಜನಪ್ರಿಯವಾದ ಗ್ರಂಥ ಚಾಣಕ್ಯ

---

### ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
### ಸಂಶೋಧನ ಕೇಂದ್ರ - ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ ತಿ ದೇ ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು ನಮ್ಮ ಪರಂಪರೆಯ ವಾಸ್ತು ಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶ ಹೊಂದಿದೆ

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ತ್ವ ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ - ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ - ತಿರುಪತಿ - 517 502

ನೀತಿ ಎಂಬ ಸುಭಾಷಿತ ಗ್ರಂಥವು ಹಲವು ಪಂಡಿತರ ಪರಿಶ್ರಮದಿಂದ ಪರಿಷ್ಕೃತವಾಗಿ ಪ್ರಕಟನೆಗೊಂಡವು ಅವುಗಳು ಮುಖ್ಯವಾಗಿ - ಲಘು ಚಾಣಕ್ಯ ನೀತಿ, ಚಾಣಕ್ಯ ಸಾರಸಂಗ್ರಹ, ಲಘುಚಾಣಕ್ಯ ಚಾಣಕ್ಯ ನೀತಿ ದರ್ಪಣ ಮತ್ತು ವೃದ್ಧ ಚಾಣಕ್ಯ ರಾಜನೀತಿ ಚಾಣಕ್ಯನೀತಿ ೩೫೦ ಶ್ಲೋಕಗಳ ಗ್ರಂಥ ಚಾಣಕ್ಯನ ನೀತಿಶಾಸ್ತ್ರವನ್ನು ಅಧ್ಯಯನ ಮಾಡುವವರು ಅವರು ಬುದ್ಧಿವಂತರಾಗಿ, ಸತ್ಯವಂತರಾಗಿ, ಶುಚಿ ಜೀವನ ನಡೆಸುತ್ತಾ ಹಿಂಸೆ ಮತ್ತು ಕೋಪಗಳನ್ನು ಬಿಟ್ಟು ಕೀರ್ತಿಯನ್ನು ಪಡೆಯುತ್ತಾನೆ ಎಂಬುವ ಈ ನೀತಿಶಾಸ್ತ್ರದ ಶ್ಲೋಕ ಹೀಗಿದೆ

ಯೇನ ಸಮ್ಯಗಧೀತೇನ
ಪ್ರಜ್ಞಾಸಂವರ್ಧತೇ ನೃಣಾಮ್
ಸತ್ಯ ಶೌಚ ರತೋ ನಿತ್ಯಂ
ಹಿಂಸಾ ಕ್ರೋಧವಿವರ್ಜಿತಃ

ಈ ನೀತಿಶಾಸ್ತ್ರವನ್ನು ಅರಿತವನ ಪ್ರಜ್ಞೆ ಹೆಚ್ಚಾಗುವುದು ನೀತಿಶಾಸ್ತ್ರವನ್ನು ತಿಳಿದು ಕಾರ್ಯ ಅಕಾರ್ಯಗಳನ್ನು ಮಾಡುವ ಮನುಷ್ಯ ಶುಭವನ್ನು ಹೊಂದುವನು ಆಪತ್‌ಕಾಲಕ್ಕೆ ಸಹಾಯವಾಗಲು ಹಣವನ್ನು ಕೂಡಿಟ್ಟುಕೊಳ್ಳಬೇಕು ಹಣಕ್ಕಿಂತ ಹೆಂಡತಿಯನ್ನು ಕಾಪಾಡಿಕೊಳ್ಳಬೇಕು ಹಣ ಮತ್ತು ಹೆಂಡತಿಗಿಂತ ಹೆಚ್ಚಿಗೆ ತನ್ನನ್ನು ತಾನು ಕಾಪಾಡಿಕೊಳ್ಳಬೇಕು ಧರ್ಮಸ್ಯ ಮೂಲಮರ್ಥಃ ಎಂಬುವ ಚಾಣಕ್ಯನ ಸೂತ್ರ. ಸದಾ ಧರ್ಮಸಾಧನೆಗೆ ಸಂಪತ್ತು ಅವಶ್ಯಕ ಎಂಬುದು ಅಕ್ಷರಶಃ ನಿಜ - ಆತ್ಮಾನಂ, ಸತತಂ ರಕ್ಷೇತ್ ದಾರೈರಪಿ ಧನೈರಪಿ - ಇವನ ಸುಭಾಷಿತ ಹಿತ ನಿಜವಾದ ಬಂಧು ಸ್ನೇಹಿತ ಯಾರು ಎಂಬುವುದನ್ನು ಪರೀಕ್ಷಿಸಲು ಕೌಟಿಲ್ಯನ ಶುಭಾಷಿತ ಶ್ಲೋಕ-

ಆತುರೇ ವ್ಯಸನೇ ಪ್ರಾಪ್ತೇ
ದುರ್ಭಿಕ್ಷೇ ಶತ್ರು ಸಂಕಟೇ
ರಾಜದ್ವಾರೇ ಶ್ಮಶಾನೇ ಚ
ಯಸ್ತಿಷ್ಠತಿ ಸ ಬಾಂಧವಃ

ರೋಗವು ಬಂದಾಗ ವ್ಯಸನಪೀಡಿತವಾದಾಗ ದುರ್ಭಿಕ್ಷದಲ್ಲಿ, ಶತ್ರುಗಳಿಂದ ಪೀಡಿತರಾದಾಗ, ರಾಜದ್ವಾರ - ಸ್ಮಶಾನದಲ್ಲಿ ಯಾರು ತನಗೆ ಸಹಾಯ ಮಾಡುತ್ತಾರೋ ಅವರೇ ನಿಜವಾದ ಬಂಧುಗಳು ಯಾರು ಈ ಪ್ರಪಂಚದಲ್ಲಿ ಸುಖಿಗಳು ಎಂಬುವುದಾಗಿ ಹೇಳುವಾಗ-

ಯಸ್ಯ ಪುತ್ರೋ ವಶೀಭೂತೋ
ಭಾರ್ಯಾ ಛಂದಾನುಗಾಮಿನೀ
ವಿಭವೇ ಯಶ್ಚ ಸಂತುಷ್ಟಃ
ತಸ್ಯಸ್ವರ್ಗಂ ಇಹೈವ ಹಿ

ಯಾರಿಗೆ ಮಗನು ವಿಧೇಯನೋ ಹೆಂಡತಿ ಹೇಳಿದಂತೆ ಕೇಳುವಳೋ, ಇರುವ ಐಶ್ವರ್ಯದಿಂದಲೇ ಯಾರು ಸಂತೃಪ್ತನೋ, ಅಂತಹವನಿಗೆ ಈ ಲೋಕವು ಸ್ವರ್ಗಕ್ಕೆ ಸಮಾನವಾದುದು ಹೀಗೆ ಹಲವಾರು ನೀತಿಶಾಸ್ತ್ರದ ಸಾಗರ ವೃದ್ಧಚಾಣಕ್ಯ ಗ್ರಂಥ ಚಾಣಕ್ಯನ ನೀತಿಶಾಸ್ತ್ರಗಳಲ್ಲಿ ಮಾನವನ ಹಿತಕ್ಕೆ ಮನುಷ್ಯನ ವ್ಯವಹಾರಕ್ಕೆ ಅವನ ಶ್ರೇಯೋಭಿವೃದ್ಧಿಗೆ ಬೇಕಾದ ನೀತಿಪಾಠ ಇದೆ ಈಗಿನ ಸಮಾಜದಲ್ಲಿ ಮಾನವ ಹಣ, ಪದವಿ, ಪ್ರತಿಷ್ಠೆಗಳಿಗೆ ಅತಿ ಆಸೆಪಡುವನು, ಇದರಿಂದ ದೈಹಿಕ ಮಾನಸಿಕವಾಗಿ ನೊಂದು ಕಷ್ಟಕ್ಕೀಡಾಗುವ ನಿದರ್ಶನಗಳು ನಮಗೆ ತಿಳಿದೇ ಇದೆ ಚಾಣಕ್ಯನ ಅತಿಯನ್ನು ಎಲ್ಲಾ ಕಾಲದಲ್ಲೂ ಬಿಡಿ ಎಂಬುವುದರ ನೀತಿ ಪಾಠ ಹೀಗಿದೆ-

ಅತಿ ಕಾಮಾತ್ ದಶಗ್ರೀವಃ
ಅತಿಲೋಭಾತ್ ಸುಯೋಧನಃ
ಅತಿ ದಾನಾತ್ ಬಲಿರ್ನಷ್ಟಃ
ಅತಿ ಸರ್ವತ್ರ ವರ್ಜಯೇತ್

ಅತಿ ಕಾಮುಕನಾದ ರಾವಣನು ಸೀತೆಯನ್ನು ಅಪಹರಿಸಿ ಹಾಳಾದನು ಅತಿ ಆಸೆಪಟ್ಟ ಲೋಭಿ ದುರ್ಯೋಧನನು ಕೆಟ್ಟ, ಅತಿ ದಾನಮಾಡುವ ಬಲಿ ಚಕ್ರವರ್ತಿ ಪಾತಾಳಕ್ಕೆ ಹೋದ ಆದ್ದರಿಂದ ಯಾವ ವಿಚಾರದಲ್ಲೂ ವಿಷಯದಲ್ಲೂ ಅತಿಯನ್ನು ಬಿಡಬೇಕು ಈ ಕೌಟಿಲ್ಯನೇ ಅತಿಭಾರಃ ಪುರುಷಮವಸಾದಯತಿ - ಎಂಬುವುದನ್ನೂ ಹೇಳದೆ ಬಿಡಲಿಲ್ಲ ಅತಿ ಸಿಹಿ ಸೇವನೆ ಸಕ್ಕರೆ ಕಾಯಿಲೆಗೆ ಮೂಲ ಅತಿ ಆಹಾರ ಅಜೀರ್ಣಕ್ಕೆ ಮೂಲ, ಅತಿ ಸ್ನೇಹ ಕೇಡುಗಳ ಮುನ್ಸೂಚನೆ ಚಾಣಕ್ಯನ - ಮಿತ ಭೋಜನಂ ಸ್ವಾಸ್ಥ್ಯಮ್ - ಎಂಬುವ ಸೂತ್ರ ಆಧುನಿಕ ಪ್ರಪಂಚಕ್ಕೆ ಒಂದು ಹಿತೋಕ್ತಿ

ಚಾಣಕ್ಯನ ಪ್ರಕಾರ ಮನುಷ್ಯ ಪ್ರಯತ್ನಮಾಡಬೇಕು ಪುರುಷ ಪ್ರಯತ್ನಕ್ಕೆ ಹೆಚ್ಚಿಗೆ ಪ್ರಾಮುಖ್ಯತೆ ಕೊಟ್ಟಿದ್ದಾನೆ ಹಲವರು ದೈವವನ್ನು ನಂಬಿ ತಮ್ಮ ಪ್ರಯತ್ನವನ್ನು ಬಿಡುವುದನ್ನು ಅವನು ಸಹಿಸಲಾರ "ನ ದೈವ ಪ್ರಮಾಣಾನಾಂ ಕಾರ್ಯಸಿದ್ಧಿಃ" ಎಂಬುವುದಾಗಿ ತಿಳಿಸುತ್ತಾ ಕೇವಲ ದೈವವನ್ನು ನಂಬಿ, ಅದೃಷ್ಟದಲ್ಲಿ ನಂಬಿಕೆ ಇಡುವವರಿಗ ಕಾರ್ಯಗಳು ಸಿದ್ಧಿಸಲಾರವು. ಕಾರಣ - ಆರುಃಸಮ್ಮ ಪ್ರಯತ್ನಸಪ್ತ ಮಂದೈವ ಚಿಂತನಂ - ಎಂಬುವುದರಲ್ಲಿ ದೃಢನಂಬಿಕೆ ಕೌಟಿಲ್ಯನಿಗೆ ಪ್ರಯತ್ನ ಮಾಡದೆ ಕಾರ್ಯ ಸಿದ್ಧಿಸಲಾರದು ಆತನ ಸೂತ್ರ "ಅಪ್ರಯತ್ನಾತ್ ಕಾರ್ಯ ವಿಪತ್ತಿರ್ಭವೇತ್" ದೈವದ ಮೇಲೆ ಅತಿ ಭರವಸೆ ಅನರ್ಥವೇ ಸರಿ ಅದಕ್ಕಾಗಿಯೇ ಚಾಣಕ್ಯ ಕಷ್ಟಬರುವುದನ್ನು ಅರಿತು ಮುಂಚೆಯೇ ಜಾಗೃತನಾಗಬೇಕು ವಿಪತ್ತು ಬಂದಾಗ ಅದನ್ನು ತೃಪ್ತಿಸಿಕೊಳ್ಳುವ ಉಪಾಯವನ್ನು ಮಾಡಬೇಕು ಅಂತಹ ಮನುಷ್ಯ ಸುಖವನ್ನು ಹೊಂದುತ್ತಾನೆ ಬಂದಿದ್ದು ಬರಲಿ ಗೋವಿಂದನ ದಯೆ ಇರಲಿ ಎಂದು ಬರೀ ದೈವ ಮೇಲೆ ಬರವಸೆ ಇಟ್ಟು ದೇವರು ಬುದ್ಧಿಯನ್ನೂ, ಸ್ವತಂತ್ರವನ್ನೂ, ವಿವೇಕ ಸಾಮರ್ಥ್ಯವನ್ನೂ ನೀಡಿದ್ದರೂ ಏನೂ ಪುರುಷಪ್ರಯತ್ನ ಮಾಡದೆ ಇರುವವನು ನಾಶವಾಗುತ್ತಾನೆ ಎಂಬುವ ಸುಂದರ ಸುಭಾಷಿತ ಚಾಣಕ್ಯನ ನೀತಿಶ್ಲೋಕ-

ಅನಾಗತ ವಿಧಾತಾ ಚ
ಪ್ರತ್ಯುತ್ಪನ್ನ ಮತಿಸ್ತಥಾ
ದ್ವಾವಿಮೌ ಸುಖ ಮೇಧೇತೇ
ಯದ್ಭವಿಷ್ಯೋ ವಿನಶ್ಯತಿ

ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ - ಎಂಬುವ ಗೀತಾಚಾರ್ಯರ ಉಕ್ತಿಯನ್ನೇ ಅನುಸರಿಸಿ ಮನಸ್ಸನ್ನು ವಿಷಯಗಳಿಂದ ದೂರ ಇರಿಸಿದರೆ ಅವನು ಬಂಧನಕ್ಕೆ ಒಳಗಾಗುವುದಿಲ್ಲ ಎಂಬುವ ನೀತಿಯನ್ನು ಕೌಟಿಲ್ಯನು ನಮಗ ಹೇಳುತ್ತಾ-

ಬಂಧಾಯ ವಿಷಯಾಸಕ್ತಿಃ
ಯುಕ್ತೈರ್ನಿರ್ವಿಷಯಂ ಮನಃ
ತದೇವ ಹಿ ಮನುಷ್ಯಾಣಾಂ
ಕಾರಣಂ ಬಂಧ ಮೋಕ್ಷಯೋಃ

ವಿಷಯಗಳಲ್ಲಿ ಆಸಕ್ತಿ ಹೊಂದಿದ ಮಾನವ ಬಂಧನಕ್ಕೆ ಒಳಗಾಗುತ್ತಾನೆ ಇಧರಲ್ಲಿ ಆಸಕ್ತಿ ಹೊಂದದ ಮನುಷ್ಯ ಮುಕ್ತಿಯನ್ನು ಹೊಂದುವನು ಮನುಷ್ಯನ ಬಂಧ ಮೋಕ್ಷಗಳಿಗೆ ಅವನ ಮನಸ್ಸೇ ಕಾರಣವು. ಇಂತಹ ಅನೇಕ ನೀತಿ ಶ್ಲೋಕಗಳು ನಮ್ಮ ಯುವಕರಿಗೆ ವಿವೇಕವನ್ನು ನೀಡಿ ಅವರಿಗೆ ಮಾರ್ಗದರ್ಶನವನ್ನು ನೀಡಿ ಅವರ ಜೀವನಕ್ಕೆ ಅವಲಂಬನವನ್ನು ನೀಡಿ ಅವರ ಜೀವನ ಸಾರ್ಥಕವಾಗುವುದರಲ್ಲಿ ಸಂಶಯವಿಲ್ಲ



# ಅಸ್ತೇಯ

- ಪಾರ್ವತಿ ಕೃಸ. ಮೂರ್ತಿ.

ಧರ್ಮದ ನಾಲ್ಕನೇ ಲಕ್ಷಣವಾದ ಅಸ್ತೇಯ ಎಂದರೆ ಕಳವು ಮಾಡದಿರುವುದು

ಈ ಜಗತ್ತಿನಲ್ಲಿ ಹುಟ್ಟಿದ ಪ್ರತಿಯೊಬ್ಬ ಮನುಷ್ಯನಿಗೂ ಎರಡು ಬಗೆಯ ಬಡತನ ಇರುತ್ತದೆ ಮೊದಲನೆಯದು ನಮ್ಮ ಸ್ವಸ್ವರೂಪದರ್ಶನದ ಬಡತನ ಅಂದರೆ ಆಧ್ಯಾತ್ಮಿಕವಾದದ್ದು ಎರಡನೆಯದು ಈ ಲೋಕದಲ್ಲಿ ಬದುಕಲು ಬೇಕಾದ ಸೌಲಭ್ಯಗಳನ್ನು ಪಡೆದುಕೊಳ್ಳುವುದರಲ್ಲಿ ಇರುವ ಬಡತನ ಈ ಎರಡರಲ್ಲಿ ಯಾವುದೇ ಬಡತನವಿದ್ದಾಗಲೂ ನಾವು ಅನ್ಯರ ಸಾಧನ ಸಂಪತ್ತಿಗೆ ಆಸೆ ಪಡದಿರುವುದೇ ಅಸ್ತೇಯ ವ್ರತವಾಗುತ್ತದೆ ಅಂದರೆ ನಮ್ಮತೃಪ್ತಿಗಾಗಿ ನಮ್ಮದಲ್ಲದ ವಸ್ತುವನ್ನು ಕಳವು ಮಾಡದಿರುವುದು ಅಸ್ತೇಯ ಎಂದಾಯಿತು

ಈ 'ಕಳವು' ಸ್ವಭಾವ ಮನಸ್ಸಿಗೆ ನಮ್ಮಲ್ಲಿರುವ ಲೋಭ ಬುದ್ಧಿಯಿಂದ ಇದಕ್ಕೆ ಆಸೆ ಮುಖ್ಯ ಕಾರಣ ಹಾಗೂ ಮೂಲ ಕಾರಣ ಯಾವುದೇ ವ್ಯಕ್ತಿ ತನ್ನ ವಿದ್ಯೆ, ಬುದ್ಧಿ, ಸಾಮರ್ಥ್ಯ, ಸ್ಥಾನ, ಮಾನ, ಅರ್ಹತೆಗಳ ಸೀಮಿತ ಸ್ಥಿತಿಯಲ್ಲಿ ಏನನ್ನು ಗಳಿಸಲಾರನೋ ಅದನ್ನು ಇನ್ನೊಬ್ಬನು ಪಡೆದಿದ್ದಾಗ ಅದನ್ನು ತಾನು ಪಡೆದುಕೊಳ್ಳಬೇಕೆಂಬ ಆಸೆ ಮೊದಲು ಹುಟ್ಟುತ್ತದೆ ತಾನು ಬಯಸಿದುದನ್ನು ಶ್ರಮವಿಲ್ಲದೇ ತನ್ನದಾಗಿಸಿಕೊಳ್ಳುವುದು ಹೇಗೆ ಎಂದು ಆ ಬಗ್ಗೆ ಚಿಂತಿಸುತ್ತದೆ

ಆಗ ಅವನ ಕಣ್ಣು ತಪ್ಪಿಸಿ ಅವನ ಅನುಮತಿ ಇಲ್ಲದೆಯೇ ಅದನ್ನು ತನ್ನದಾಗಿಸಿಕೊಳ್ಳಲು ಪ್ರಯತ್ನಿಸುತ್ತದೆ ಆಗ ಅದನ್ನು ಕದಿಯುವಂತೆ ಮನಸ್ಸಿಗೆ ಪ್ರೇರಣೆಯಾಗುತ್ತದೆ ಕದಿಯುತ್ತೇವೆ - ಇದು ಒಂದು ರೀತಿ ಇನ್ನೊಂದು ನಮ್ಮ ಮನಸ್ಸಿನಲ್ಲಿರುವುದೇ ಒಂದು ನಾವು ಹೊರನೋಟಕ್ಕೆ ತೋರಿಸಿಕೊಳ್ಳುವುದೇ ಒಂದು ನಾವು ಹಲವು ಸಲ ಮಿತ್ರರೊಡನೆ ಮಾತನಾಡುವಾಗ ಈ ಮಾತನ್ನು ಕೇಳುತ್ತಿರುತ್ತೇವೆ ಅದು, ಅವನು ಯೋಚಿಸುವುದೇ ಒಂದು, ಹೇಳುವುದಿನ್ನೊಂದು, ಮಾಡುವುದು ಮತ್ತೊಂದು ಈ ಇಬ್ಬಗೆಯ ಮನಸ್ಥಿತಿಯೂ ಕಳವು ಮಾಡಿದ ಮನಸ್ಥಿತಿಯೇ ಈ ಎರಡೂ ಪರಿಸ್ಥಿತಿ ಧರ್ಮಸಾಧಕರಿಗೆ ದೂರವಾಗಿರಬೇಕು ಮೊದಲನೆಯದು ಲೌಕಿಕ ಜೀವನಕ್ಕೆ ನೇರವಾಗಿ ಹತ್ತಿರವಾದರೆ, ಎರಡನೆಯದು ಆಧ್ಯಾತ್ಮ ಜೀವಿಗಳಿಗೆ ಅತ್ಯಂತ ಹತ್ತಿರವಾದುದು

ಹಾಗಾದರೆ ಈ ಸ್ವಭಾವ ಸಿದ್ಧವಾದ ಲೋಭದಿಂದ ಆಸೆಯಿಂದ ಪ್ರೇರಿತವಾದ, ಅನ್ಯರ ಸಂಪತ್ತನ್ನು ಅಪಹರಿಸುವ ಬುದ್ಧಿಯನ್ನು ಬಿಡುವುದು ಹೇಗೆ ಇದು ಈಗ ನಾವು ಮಾಡಬೇಕಾಗಿರುವ ಚಿಂತನ, ಇದಕ್ಕೆ ಮತ್ತೆ ನಾವು ಮನಸ್ಸಿನ ಸಂಸ್ಕಾರಕ್ಕೇ ಶರಣಾಗಬೇಕು ನಮ್ಮ ಮನಸ್ಸು ಎಲ್ಲ ಪರಿಸ್ಥಿತಿಯಲ್ಲೂ ಪ್ರಶಾಂತವಾಗಿರುವಂತೆ ಅಭ್ಯಾಸ ಕೊಡಬೇಕು ಇದು ಕಷ್ಟವೂ ಹೌದು

ಆದರೆ, ನಮ್ಮ ಮನಸ್ಸಿಗೆ ಬಂದ ಯಾವುದೇ ವಿಚಾರಕ್ಕೂ ತಕ್ಷಣವೇ ಪ್ರತಿಕ್ರಿಯಿಸುವಂತೆ ಮಾಡುವುದನ್ನು ಬಿಟ್ಟು ಅದರ ಎಲ್ಲ ಮುಖಗಳನ್ನೂ ಪರಿಶೀಲಿಸುವ ಅಭ್ಯಾಸ ಭಾವವನ್ನು ಮನಸ್ಸಿಗೆ ಕೊಡಬೇಕು ಯಾವುದೇ ಭಾವನೆ ಬಂದಾಗಲೂ ಮನಸ್ಸು ಜಾಗ್ರತವಾಗಿರುವಂತೆ ನೋಡಿಕೊಳ್ಳಬೇಕು ಮನಸ್ಸಿನಲ್ಲಿ ಹುಟ್ಟುವ ಭಯ ಮತ್ತು ಆಸೆ ನಮ್ಮ ಪ್ರಶಾಂತ ಮನಃಸ್ಥಿತಿಯನ್ನು ನಾಶಮಾಡುವ ಬೇರು ಈ ಬೇರು ತೆಂಗಿನಮರದ ಬೇರಿನಂತೆ ಎಷ್ಟು ಆಳಕ್ಕೆ ಬೇಕಾದರೂ ಎಲ್ಲ ಕಡೆಗೂ ನುಗ್ಗಿಬಿಡಬಲ್ಲದು ಆಗ ನಮ್ಮ ಮನಸ್ಸಿನಲ್ಲಿ ಅರಿವಿನ ಎಚ್ಚರ ಬರಲಾರದು ಈ ಬೇರು ಬಿಡುವ ಮುನ್ನವೇ ನಾವು ಬಹಳ ಎಚ್ಚರವಾಗಿರಬೇಕು ಹಾಗಾದರೆ ಈ ಬೇರು ಬಿಡುವುದು ಯಾವಾಗ? ಈ ಬೇರಿನ ಉಗಮ ಎಲ್ಲಿ ? ಏಕೆ ? ಹೇಗೆ ?

ನಾವು ಮಕ್ಕಳಾಗಿದ್ದಾಗ ನಮಗೆ ಬೆಲ್ಲ ಕಂಡರೆ ತುಂಬ ಇಷ್ಟವಾಗಿತ್ತು ಎಂದುಕೊಳ್ಳಿ, ಬೆಲ್ಲ ಕಂಡರೆ ತಿನ್ನಬೇಕೆನ್ನುವ ಆಸೆ ಆಗುತ್ತಿತ್ತು ಅಥವಾ ಬೆಲ್ಲದ ರುಚಿ ಮನಸ್ಸಿಗೆ ಬಂದಾಗಲೆಲ್ಲಾ ಬೆಲ್ಲ ತಿನ್ನಬೇಕೆನಿಸುತ್ತಿತ್ತು ಅಮ್ಮನನ್ನು ಬೆಲ್ಲ ಕೇಳುತ್ತಿದ್ದೆವು ಅಮ್ಮನ ಮನಸ್ಸು ಸಮಾಧಾನವಾಗಿದ್ದರೆ ಪ್ರೀತಿಯಿಂದ ಒಂದು ಸಣ್ಣ ಚೂರು ಬೆಲ್ಲ ಕೊಡುತ್ತಿದ್ದಳು ಅವಳ ಮನಸ್ಸು ಬೇರೇನೋ ಗೊಂದಲದಲ್ಲಿದ್ದರೆ "ಬೆಲ್ಲವೂ ಇಲ್ಲ ಏನೂ ಇಲ್ಲ ನಡಿ ಆಚೆ, ಬೆಲ್ಲ ತಿಂದರೆ ಹೊಟ್ಟೆ ನೋವು ಬರುತ್ತೆ" ಎಂದು ಹೆದರಿಸಿ ಕಳಿಸುತ್ತಿದ್ದಳು ಎಂದು ಕೊಳ್ಳಿ, ಆಗ ನಾವು ಏನು ಮಾಡುತ್ತಿದ್ದೆವು? ಅಮ್ಮನಿಗೆ ಗೊತ್ತಾಗದ ರೀತಿಯಲ್ಲಿ ಬೆಲ್ಲ ಎಗರಿಸಿ ತಿನ್ನಬೇಕೆಂಬ ಚಿಂತೆ ತನಗೆ ತಾನೇ ಬರುತ್ತಿತ್ತು ಅಲ್ಲವೆ? ಅಮ್ಮ ಅಡಿಗೆಮನೆಯಿಂದ ಹೊರಗೆ ಹೋಗುವುದನ್ನೇ ನೋಡಿಕೊಂಡು ಓಡಿ ಹೋಗಿ ಬೆಲ್ಲದ ಡಬ್ಬವೋ ಪಾತ್ರೆಯೋ ತೆಗೆಯುತ್ತಿದ್ದೆವು. ಆಗ ಅಮ್ಮ ಎಲ್ಲಿ ಬಂದು ಹೊಡೆಯುತ್ತಾಳೋ, ಬಯ್ಯುತ್ತಾಳೋ ಎಂಬ ಭೀತಿಯೂ ಇರುತ್ತಿತ್ತು

ಈ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಎರಡು ಮುಖ್ಯ ಲಕ್ಷಣವನ್ನು ನಾವು ಗಮನಿಸಬೇಕು ಒಂದು ಬೆಲ್ಲ ತಿನ್ನಬೇಕೆಂಬ ಆಸೆ, ಎರಡು ಕೇಳಿದರೆ ಅಮ್ಮ ಕೊಡುತ್ತಿಲ್ಲ ಬಯ್ಯುತ್ತಾಳೆ ಅಥವಾ ಹೊಡೆಯುತ್ತಾಳೆಂಬ ಭೀತಿ ಆದರೂ ಬೆಲ್ಲ ತಿನ್ನಲೇಬೇಕೆಂಬ ಪ್ರಬಲವಾದ ಆಸೆ ಇದು ಗೊತ್ತಾಗದಂತೆ ಬೆಲ್ಲವನ್ನು ಕದಿಯಲು ಪ್ರಚೋದಿಸುತ್ತದೆ ಈ ಸನ್ನಿವೇಶ ಎಳೆಯ ಮನಸ್ಸಿನಲ್ಲಿ ಉಂಟಾಗುವ ಕಳವು ಮನೋಭಾವದ ಬೀಜ

ಮತ್ತೊಂದು ಉದಾಹರಣೆಯನ್ನು ನೋಡೋಣ ಅಮ್ಮ ಬೆಲ್ಲ ಕೇಳಿದಾಗ ಹೊಡೆದೋ ಬೈದೋ ಕಳಿಸಿಬಿಡುತ್ತಾಳೆ. ಎಂದುಕೊಳ್ಳಿ, ಮಗು ಅಳುತ್ತಾ ಹೊರಬರುತ್ತದೆ ಆಗ ಮನೆಯಲ್ಲಿದ್ದ ಅಜ್ಜ ಮಗುವಿನ ಹತ್ತಿರ ಬಂದು ಎತ್ತಿಕೊಂಡು ಕಾರಣ ಕೇಳುತ್ತಾನೆ ಮಗು ಕಾರಣವನ್ನು ಹೇಳುತ್ತದೆ ಆಗ ಅಜ್ಜ "ಹೋಗ್ಲೀ ಬಾ ನಾನು ಮಿಠಾಯಿ ಕೊಡಿಸುತ್ತೇನೆ" ಎಂದು ಅಂಗಡಿಗೆ ಕರೆದುಕೊಂಡು ಹೋಗಿ ಮಿಠಾಯಿ ಕೊಡಿಸುತ್ತಾನೆ

ತಾಯಿ ಬೆಲ್ಲ ಏಕೆ ಕೊಡಲಿಲ್ಲ ಎಂದು ಅಜ್ಜ ಯೋಚಿಸಲಿಲ್ಲ ತಂದೆ ತಾಯಿಯರಿಗೆ ಮಗುವಿನ ಬಗ್ಗೆ ಇರುವ ಕಾಳಜಿ ಅಜ್ಜಗೆ ಇರುವುದಿಲ್ಲವೇ? ಇರುತ್ತದೆ ಆದರೆ ಸ್ವರೂಪ ಬೇರೆ ಆ ಕ್ಷಣದಲ್ಲಿ ಮಗುವಿಗೆ ಖುಷಿ ಕೊಡುವ ಬುದ್ಧಿ, ಆತ ಶಾಶ್ವತ ವಾಗಿ ಆ ಮಗುವಿನ ಎಲ್ಲ ಅವಶ್ಯಕತೆಗಳನ್ನು ತೀರಿಸಬೇಕಾಗಿರುವುದಿಲ್ಲ ಆದರೆ ಮಗುವನ್ನು ಆ ನಿಮಿಷ

(32 ನೇ ಪುಟನೋಡಿ)

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ ಆಲಯದ ಶಾಸನಗಳು

ಆಂಗ್ಲ ಮೂಲ - ಡಾ|| ಎಸ್. ರಮೇಶನ್.

ಕನ್ನಡಾನುವಾದ - ಬಿ. ಎನ್. ಶ್ರೀನಿವಾಸನ್.

(ಮುಂದುವರೆದಿದೆ)

## ಪಾಂಡ್ಯರು ಮತ್ತಿತರ ಸ್ಥಳೀಯರ ಆಳ್ವಿಕೆ

**ಪ್ರವೇಶ :** ಚೋಳರ ಪತನಾನಂತರ ಸಾಮ್ರಾಜ್ಯವು ಹರಿದು ಹಂಚಿಹೋಗಿ ಹಲವಾರು ಶತಮಾನಗಳವರೆಗೆ ಒಂದು ಕೇಂದ್ರಶಕ್ತಿ ಎಂಬುದಿಲ್ಲವಾಯಿತು ಚೋಳ ಸಾಮ್ರಾಟರಲ್ಲಿ ಕಡೆಯ ಪ್ರಸಿದ್ಧನಾದ ಮೂರನೇ ಕುಲೋತ್ತುಂಗನ ಕಾಲದಲ್ಲಿಯೇ ತೆಲುಗು ಚೋಳರು ಪ್ರಬಲರಾಗಿ ಕಂಚಿಯಿಂದ ಬಂದು ಆಕ್ರಮಣ ಮಾಡಿದರು ಈತನ ಉತ್ತರಾಧಿಕಾರಿಯಾದ ಮೂರನೇ ರಾಜೇಂದ್ರನು ಈ ಪತನದ ವೇಗವನ್ನು ಕಡಮೆ ಮಾಡದೆ ಹೋದನು ಹಾಗೂ ಇವನ ಕಾಲದಲ್ಲಿ ಸಾಮಂತ ರಾಜರೆಲ್ಲ ಬಹುಪಾಲು ಸ್ವತಂತ್ರರಾದರು ಕ್ರಿಶ 13 ನೇ ಶತಮಾನದ ಆದಿಯಲ್ಲಿ ಒಂದನೇ ಮಾರ ವರ್ಮ ಸುಂದರ ಪಾಂಡ್ಯನು ಚೋಳ ಸಾಮ್ರಾಜ್ಯವನ್ನು ಆಕ್ರಮಿಸಿ ಅದರ ದಕ್ಷಿಣ ಭಾಗಗಳನ್ನು ವಶಪಡಿಸಿಕೊಂಡನು

ಈ ರಾಜಕೀಯ ಪ್ರಕ್ಷುಬ್ಧಕಾಲದಲ್ಲಿ ಹೆಚ್ಚುಮಂದಿ ಸ್ಥಳೀಯ ಪಾಳಯಗಾರರು ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿದ್ದು, ಅವರ ದಾಖಲಾತಿಗಳು ತಿರುಮಲೆಯ ಆಲಯದಲ್ಲಿ ಕಂಡುಬರುತ್ತವೆ ಇವರಲ್ಲಿ ಕಾಡವರಾಯರು, ಯಾದವರಾಯರು, ತೆಲುಗು ಚೋಳರು, ತೆಲುಗು ಪಲ್ಲವರು ಆಲಯಕ್ಕೆ ದಾನ ದತ್ತಿ ನೀಡಿದ ದಾಖಲೆಗಳನ್ನು ಬಿಟ್ಟುಹೋಗಿದ್ದಾರೆ

**ಪಾಂಡ್ಯರು :** ಒಂದನೇ ಜಟಾವರ್ಮ ಸುಂದರ ಪಾಂಡ್ಯನ ಪ್ರಶಸ್ತಿಯನ್ನು ಸಂಸ್ಕೃತದಲ್ಲಿ ತಿಳಿಸುವ ಹಲವಾರು ಶಾಸನಗಳಿವೆಯಾದರೂ ಪಾಂಡ್ಯರ ಅರಸರಲ್ಲಿ ದಾಖಲಾತಿ ಪಡೆದವನು ಇವನೊಬ್ಬನೇ

ತಿ ತಿ 239 ನೇ ಶಾಸನವು ಮೂರು ಸಂಸ್ಕೃತ ವೃತ್ತಗಳಿಂದಾಗಿದ್ದು ಇವುಗಳಲ್ಲಿನ ಮೊದಲನೆಯದು ಶಾರ್ದೂಲ ವಿಕ್ರೀಡಿತ ವೃತ್ತದಲ್ಲಿದ್ದು, ಸುಂದರ ಪಾಂಡ್ಯನು ಸೀಮಾರಹಿತ ಕೀರ್ತಿವಂತನೆಂದೂ, ಧರ್ಮಮಾರ್ಗ ತಪ್ಪಿದವರನ್ನು ತೀವ್ರವಾಗಿ ಶಿಕ್ಷಿಸುವನೆಂದೂ ಗಂಡಗೋಪಾಲನ ಕ್ಷುಲ್ಲಕ ವರ್ತನೆಯಿಂದಾಗಿ, ಅವನನ್ನು ಮೇಲಿನ ಲೋಕಕ್ಕೆ ಓಡುವಂತೆ ಮಾಡಿದನೆಂದೂ ತಿಳಿಸುತ್ತದೆ ಎರಡನೆಯದು ಆರ್ಯಾವೃತ್ತದಲ್ಲಿದ್ದು ಊರ್ಧ್ವಲೋಕಕ್ಕೆ ಸಂದ ವೀರ ಗಂಡಗೋಪಾಲನು ಅಸಿದಾರಾವ್ರತವನ್ನು ಮಾಡುವ ಶಿಕ್ಷೆಗೆ ಒಳಗಾಗಿರುವನೆಂದೂ ತಿಳಿಸಿವರೆ ಮೂರನೆಯ ಪದ್ಯ ಸಾಕಷ್ಟು ಜೀರ್ಣವಾಗಿದ್ದು ರಾಜನ ಕೇರಳ ವಿಜಯವನ್ನು ಸೂಚಿಸುತ್ತದೆ ತಿ ತಿ 241 ನೇ ಶಾಸನವು ಸಂಸ್ಕೃತ ಉಪಜಾತಿ ವೃತ್ತದಲ್ಲಿದ್ದು, ಸುಂದರ ಪಾಂಡ್ಯನು ವೈರಿಗಳ ರಕ್ತದಲ್ಲಿ ತನ್ನ ಖಡ್ಗವನ್ನು ತೊಳೆಯುತ್ತಿದ್ದನೆಂದೂ, ಆಂಧ್ರೇಶ್ವರನನ್ನು ಸೋಲಿಸಿದನೆಂದೂ, ವೀರಗಂಡಗೋಪಾಲನಿಗೆ ಅಸಿದಾರಾ ವ್ರತವನ್ನು ಹೇಳಿಕೊಟ್ಟನೆಂತಲೂ ಹೊಗಳುತ್ತದೆ



ಎರಡು ಶಾಸನಗಳು (ತಿ ತಿ 164 ಹಾಗೂ 165) ಸುಂದರ ಪಾಂಡ್ಯನನ್ನೂ ಅವನ ಸಾಮಂತ ವೀರ ನರಸಿಂಗದೇವನನ್ನೂ ಒಟ್ಟಿಗೆ ಹೆಸರಿಸುತ್ತವೆ ಮೊದಲನೆಯದು ಸುಂದರ ಪಾಂಡ್ಯನ ಆಳ್ವಿಕೆಯ 12 ನೇ ವರ್ಷದಿಂದ ಜಾರಿಗೆ ಬಂದಂತಹ ಗ್ರಾಮವೊಂದರ ಸರ್ವಮಾನ್ಯವನ್ನೂ, ಮತ್ತೊಂದು ನಾಯನಾರ್‌ನ ಆಡಳಿತದ ಮೂರನೇ ವರ್ಷದಿಂದ ಜಾರಿಗೆ ಬಂದ ಭೂಮಿಯ ದಾನವನ್ನೂ ಸೂಚಿಸುತ್ತವೆ

ಪದಿರಿವೇಡು ಗ್ರಾಮವನ್ನು ಸರ್ವಮಾನ್ಯವನ್ನಾಗಿ ನೀಡಿದಾಗ, ಅಲ್ಲಿಯವರೆಗೆ ರಾಜ್ಯದ ವಸೂಲಾತಿಯಾಗಿದ್ದ ಹಲವಾರು ತೆರಿಗೆಗಳು - ಪಟ್ಟಿಪ್ಪೊನ್, ಪೊನ್‌ವರಿ, ಕುದಿರೈವರಿ, ಕಾಣಿಕ್ಕೈ, ನಾಟ್ಟುವರಿ, ನಲ್ಲೇರುಡಿ, ನರ್ಪಸು, ಮಾವಾಡೈ, ಮರವಡೈ, ಕಡಮೈ ಮುಂತಾದವುಗಳನ್ನು ಕೊಡಬೇಕಾಗಿ ಬಂದಿತು ಇವುಗಳಲ್ಲಿ ಹಲವನ್ನು ಹಣದ ರೂಪದಲ್ಲಿ ನೀಡುತ್ತಿದ್ದು ಅವನ್ನು ಪೊನ್ ಆಯಂ ಎಂದೂ, ಮಿಕ್ಕವನ್ನು ಧಾನ್ಯದ ರೂಪದಲ್ಲಿ ನೀಡುತ್ತಿದ್ದು ಅವುಗಳನ್ನು ನೆಲ್ ಆಯಂ ಎಂದೂ, ಕರೆಯುತ್ತಿದ್ದರು ಸರ್ವಮಾನ್ಯವಾಗಿ ನೀಡಿದ ಗ್ರಾಮವು ತಿರುಕ್ಕುಡವೂರು - ನಾಡುವಿನ ಒಂದು ಭಾಗವಾದ ಅಸುವ ಮುಕ್ಕಿಳಿನಾಡುವಿನಲ್ಲಿದ್ದಿತು ಅಸುವ ಮುಕ್ಕಿಳಿನಾಡು ಹಲವು ಗ್ರಾಮಗಳ ಸಮುದಾಯವಾಗಿದ್ದು ಇಂತಹ ಹಲವು ಸಮುದಾಯಗಳಿಂದ ಒಂದು ಮುಖ್ಯ ನಾಡು ಉಂಟಾಗುತ್ತಿದ್ದಿತು.

ತಿ ತಿ 165 ನೇ ಶಾಸನವು ರಾಜನು ಭೂಮಿಯ ಅಥವಾ ಗ್ರಾಮದ ದಾನ ನೀಡುವ ರೀತಿಯನ್ನು ವಿವರಿಸುತ್ತದೆ ಅಗರ ಪರ್ರು(ಪಂಚಾಯತಿ)ವಿನಲ್ಲಿ

ಸ್ಥಳೀಯ ಆಲಯುದ ಸ್ಥಾನತ್ತಾರರು ಅಗತ್ಯವಿದ್ದ
ಭೂಮಿಯು ಬಗ್ಗೆ ಬಿನ್ನವತ್ತಳಿಕೆಯನ್ನು ನೀಡುತ್ತಿದ್ದು
ಇದನ್ನು ನಾಡವರು - ಕುಡವುರನಾಡು ಹಾಗೂ
ತೊಂಡ ಪಡೈಪರ್ರುವಿನಲ್ಲಿ ಚರ್ಚಿಸಿ, ಪೆರಿಯು ವಿಮಾ
ನಾಟ್ಟಾನ್ ಇದನ್ನು ಹಾಗೆಯೇ ರಾಜನಿಗೆ ತಲುಪಿಸು
ತ್ತಿದ್ದ ರಾಜನು ಬಿನ್ನವತ್ತಳಿಕೆಯಲ್ಲಿನ ದೇಡಿಕೆಯನ್ನು
ಅದು ಇರುವ ಹಾಗೆಯೇ ಒಪ್ಪಿಕೊಂಡು ದಾ
ವನ್ನು ಬಾಯಿ ಮಾತಿನ ಮೂಲಕ ಯಾದವರಾಯ
ನಿಗೆ ತಿಳಿಸುತ್ತಿದ್ದನು ಇದು ಚೋಳರ ಆಡಳಿತವನ್ನ
- ಪ್ರಮುಖವಾಗಿ ಮೂರನೇ ರಾಜೇಂದ್ರನ ಕಾಲದ
ಲ್ಲಿದ್ದಂತೆಯೇ ಇದೆ ಎನ್ನದೇಕು (ಜಿ ಟಿ 126)

ಕಾಡವರಾಯರು : ತಿ ತಿ 226 ಹಾಗೂ
227 ರ ಶಾಸನಗಳು ಕಾಡವ ಕೊಪ್ಪೆರುಂಜಿಗನನ್ನು
ಸರ್ವಾಂಗ ಖಡ್ಗ ಮಲ್ಲ ಎಂದು ಚಿತ್ರಿಸುತ್ತದೆ

ಯಾದವರಾಯರು · ತಿ ತಿ 170 ಶಾಸ
ನದಲ್ಲಿ ತಿರುಕಾಳತ್ತಿ ಯಾದವರಾಯನ ಉಲ್ಲೇಖ
ವಿದೆ ಇದು ಅವನ ಅನೇಕ ಬಿರುದುಗಳನ್ನು ವಿವರಿ
ಸುತ್ತ ಅವನ ಆಡಳಿತದ 19 ನೇ ವರ್ಷದಲ್ಲಿ ಹೊರ
ಬಿದ್ದಿತು

ತಿರುಕಾಳತ್ತಿ ದೇವನ ಮಗನಾದ ಸಿಂಗಪಿಳ್ಳೈ
ಅಲಿಯಾಸ್ ವೀರರಾಕ್ಷಸ ಯಾದವರಾಯನು ತಿರು
ಕ್ಕುಡವೂರು ನಾಡಿನಲ್ಲಿ ಒಂದು ಜಮೀನನ್ನು ದಾನ
ಮಾಡಿ ಅವರಲ್ಲಿ ಬೆಳೆದ ಧಾನ್ಯದಿಂದ ಬಂದ ಆದಾ
ಯದಲ್ಲಿ ತಿರುವೆಂಕಟ ಮುಡೈಯಾನನ ತಿರುಮಂ
ತಿರ ತಿರುಪ್ಪೋನಕಕ್ಕೆ ಏರ್ಪಾಡು ಮಾಡಿದನು (ತಿ
ತಿ 293 ಹಾಗೂ 362)

ನಂತರ ಬರುವವನೇ ವೀರನರಸಿಂಹ ದೇವ
ಯಾದವರಾಯ ಈತನ ಶಾಸನಗಳೆಲ್ಲ ಬಹು
ತೇಕ ಇವನ ಆಡಳಿತದ 12 ನೆಯ ಮತ್ತು 51
ನೆಯ ವರ್ಷಗಳ ಮಧ್ಯದಲ್ಲಿ ಲಿಖಿಸಲ್ಪಟ್ಟವು. ಈತನ
ಮೊತ್ತ ಮೊದಲ ಉಲ್ಲೇಖವು ತಿ ತಿ 120 ರಲ್ಲಿ ಕ್ರಿ.ಶ
1209 ರಲ್ಲಿ ಎಂದರೆ ಮೂರನೇ ಕುಲೋತ್ತುಂಗನ
ಕಾಲದಲ್ಲಿ ಕಂಡುಬಂದರೆ ಕೊನೆಯ ಉಲ್ಲೇಖವು
ತಿ ತಿ 164 ರಲ್ಲಿ ಜಟಾವರ್ಮ ಸುಂದರಪಾಂಡ್ಯನ
ಆಡಳಿತದ 12 ನೇ ವರ್ಷದಲ್ಲಿ ಕ್ರಿ.ಶ 1262 ರಲ್ಲಿ
ಕಂಡುಬರುತ್ತದೆ ಹೀಗಾಗಿ ಈತನ ಆಡಳಿತ ಕನಿಷ್ಠ
54 ವರ್ಷಗಳಾಗಿದ್ದು, 125 ಜಿ ಟಿ ಯಲ್ಲಿ ಹೇಳುವ
ಈತನ ಆಳ್ವಿಕೆಯ 51 ನೇ ವರ್ಷವೆಂಬುದು ಖಚಿತ
ವಾದ ಕಾಲಗಣನೆಯಾಗುತ್ತದೆ

ತಿರುಮಲೆ ತಿರುಪತಿ ದೇವಸ್ಥಾನಗಳು

## ತಿರುಪತಿಯಲ್ಲಿ ವಸತಿ ಸೌಲಭ್ಯ

**ಉಚಿತ ವಸತಿ :**

ಶ್ರೀ ಗೋವಿಂದರಾಜ ಧರ್ಮಶಾಲೆ (ಎರಡನೆಯ ಸತ್ರ) ಹಾಗೂ ಶ್ರೀ ಕೋದಂಡರಾಮಸ್ವಾಮಿ ಧರ್ಮಶಾಲೆಗಳು (ಮೂರನೆಯ ಸತ್ರ) ತಿರುಪತಿಯ ರೈಲ್ವೆ ನಿಲ್ದಾಣದ ಹಿಂಭಾಗದಲ್ಲಿದ್ದು ಇಲ್ಲಿ ಅಡುಗೆ ಮಾಡಿಕೊಳ್ಳುವ ಸದುಪಾಯಗಳಿರುವಂತಹ ಖಾಲಿ ಕೋಣೆಗಳನ್ನು ಯಾತ್ರಿಕರಿಗೆ ಉಚಿತವಾಗಿ ನೀಡಲಾಗುವುದು ಧರ್ಮಶಾಲೆಯಲ್ಲಿನ ಅಧಿಕಾರಿಗಳನ್ನು ಯಾತ್ರಿಕರು ವಿಚಾರಿಸಿ ಈ ಕೋಣೆಗಳನ್ನು ಪಡೆಯಬಹುದು ಮೂರನೆಯ ಸತ್ರದಲ್ಲಿ ಸುಸಜ್ಜಿತ ಕೋಣೆಗಳು ಬಾಡಿಗೆಗೆ ದೊರೆಯುತ್ತವೆ ಸೇವಾಶುಲ್ಕದ ಒಂದು ದಿನಕ್ಕೆ ರೂ 30/-, ದೂರವಾಣಿ - 20991

**ಎಸ್.ವಿ. ಅತಿಥಿಗೃಹ :**

ತಿರುಪತಿ ರೈಲ್ವೆ ನಿಲ್ದಾಣದ ಉತ್ತರದಲ್ಲಿದೆ ಪ್ರತಿಸೂಟ್ ರೂ 100/-
ದಯವಿಟ್ಟು ವಿಚಾರಿಸಿ - ಡೆ ಎಕ್ಸಿಕ್ಯೂಟಿವ್ ಆಫೀಸರ್ (ಸ್ವಾಗತ),
ದೂರವಾಣಿ - 25144

**ಶ್ರೀ ಪದ್ಮಾವತಿ ಅತಿಥಿಗೃಹ :**

ಹವಾನಿಯಂತ್ರಿತ - ಚಿತ್ತೂರು ರಸ್ತೆಯಲ್ಲಿದೆ
ಎರಡು ಹಾಸಿಗೆ ಕೋಣೆ ರೂ 150/-,
ಸಿಂಗಲ್ ರೂಂ - ರೂ 100/-,
ನಂ. - 16, 18 ರೂಂಗಳು ಒಂದಕ್ಕೆ ರೂ 250/-,
ನಂ - 11, 12, 15, 17 ರೂಂಗಳು ಒಂದಕ್ಕೆ ರೂ 200/-,
ನಂ 21 ರಿಂದ 32 ರೂಂಗಳು ಒಂದಕ್ಕೆ ರೂ 150/-

ದಯವಿಟ್ಟು ವಿಚಾರಿಸಿ - ಡೆ ಎಕ್ಸಿಕ್ಯೂಟಿವ್ ಆಫೀಸರ್ (ಸ್ವಾಗತ)
ದೂರವಾಣಿ - 25103, 22029, 27993

**ತಿ.ತಿ.ದೇ. ಅಲಿಪಿರಿ ಅತಿಥಿ ಗೃಹ :**

ಪ್ರತಿ ಸೂಟ್ ರೂ 75/-,
ದೂರವಾಣಿ - 20080

**ಯಾತ್ರಿಕರು ಈ ಅವಕಾಶವನ್ನು ಸದುಪಯೋಗ ಪಡಿಸಿಕೊಳ್ಳಲು ಕೋರಲಾಗಿದೆ.**

**ತಿ. ತಿ. ದೇ.**



ಈತನು ತುಲಾರೋಹಣ ಕಾರ್ಯಕ್ರಮವನ್ನೂ -ಎಂದರೆ ತನ್ನ ತೂಕದ ಚಿನ್ನವನ್ನು ಆಲಯಕ್ಕೆ ದಾನ ಮಾಡಿ ಅದನ್ನು ಆಲಯದ ವಿಮಾನದ ಚಿನ್ನದ ಗಿಲೀಟು ಮಾಡಲು ಬಳಸುವುದನ್ನು ನಡೆಸಿರಬೇಕು ಇದರಿಂದಾಗಿ ಮೇರುಪರ್ವತಕ್ಕೆ ಸಮಾನವಾದ ಹೊಳಪು ವೆಂಕಟನಗಕ್ಕೆ ಬಂದಿತೆಂದು ಹೇಳಲಾಗಿದೆ ಒಂದನೇ ಜಟಾವರ್ಮ ಸುಂದರ ಪಾಂಡ್ಯನು (ತಿ ತಿ 172) ವಿಮಾನದ ಮೇಲೆ ಕನಕ ಕಳಸವನ್ನು ಪ್ರತಿಷ್ಠಾಪಿಸುವ ಹೊತ್ತಿನಲ್ಲಿಯೇ ಈ ಮುಲಾಮಿಕರಣ ಪ್ರಕ್ರಿಯೆಯೂ ನಡೆದಿರಬೇಕು ತಿ ತಿ 195 ರಲ್ಲಿ ಹೇಳಿರುವಂತೆ ತಿರುಪತಿಯ ಯಾವುದೋ ಒಂದು ಕಡೆಯಲ್ಲಿ ವೀರನರಸಿಂಗ ಪೆರುಮಾಳ್ ವಿಗ್ರಹ ಪ್ರತಿಷ್ಠೆಯಲ್ಲಿ ಪ್ರತ್ಯೇಕ ಆಸಕ್ತಿ ವಹಿಸಿದ್ದನೆಂದು ತಿಳಿದು ಬರುತ್ತದೆ ಒಬ್ಬ ದೇಶಾಂತರಿಯಾದ ತಿರುಪ್ಪುಲ್ಲಾಣಿ ದಾಸರಿಂದ ವೀರನರಸಿಂಗಯಾದವರಾಯನ ಆಡಳಿತದ 40 ನೆಯ ವರ್ಷದಲ್ಲಿ ಅವನ ಆಜ್ಞೆಯಂತೆ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದ ಒಳಗುಡಿಯ ಜೀರ್ಣೋದ್ಧಾರ ಕಾರ್ಯ ನಡೆಯಿತು ಜೀರ್ಣೋದ್ಧಾರ ಕಾರ್ಯ ಮುಗಿದ ಮೇಲೆ ಹಳೆಯ ಗೋಡೆಗಳ ಮೇಲಿದ್ದ ಶಾಸನಗಳಿಲ್ಲವನ್ನೂ ಪುನಃ ಹಾಗೆಯೇ ಅವುಗಳ ಮೂಲಸ್ಥಳಗಳಲ್ಲಿ ಪ್ರತಿ ಮಾಡಬೇಕಾಗಿದ್ದಿತು ಹೀಗೆ ವೀರ ನರಸಿಂಗ ಯಾದವರಾಯನ ಆಜ್ಞೆಯಿಂದಾಗಿ ಆಲಯದ ಉತ್ತರದ ಗೋಡೆಯ ಪಶ್ಚಿಮ ಮೂಲೆಯಲ್ಲಿ ನಾಲ್ಕು ಚೋಳ ಶಾಸನಗಳನ್ನು (ತಿ ತಿ 17,18, 19, 20) ಪುನಃ ಲಿಖಿಸಿರುವುದನ್ನು ನೋಡಬಹುದಾಗಿದೆ ಈ ದೇಶಾಂತರಿಯು ಚೇರವನ್ ಮಹಾದೇವಿ ಚತುರ್ವೇದಿ ಮಂಗಲದ ತಿರುಪ್ಪುಲ್ಲಾಣಿದಾಸರ್ ಅಥವಾ ಚೇರಮದೇವಿಯೇ ಆಗಿರಬಹುದು ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಒಳಗುಡಿಯ ಜೀರ್ಣೋದ್ಧಾರ ಕಾರ್ಯ ನಡೆದದ್ದು ಕ್ರಿಶ 1245 ರಲ್ಲಿ ಯಾದವರಾಯ ಕುಟುಂಬದಲ್ಲಿ ನಂತರ ಬಂದವನು ತಿರುವೆಂಕಟನಾಥ ತಿ ತಿ ದೇವಸ್ಥಾನಗಳ ನಾಲ್ಕು ಶಾಸನಗಳು - (ತಿ ತಿ 189, 195 ಹಾಗೂ ಜಿ ಟಿ 11, 40) ಈತನ ಹೆಸರಿನಲ್ಲಿದ್ದು ಈತನ ಆಡಳಿತದ 8-12 ನೇ ವರ್ಷಗಳದ್ದಾಗಿವೆ ತನ್ನ ಸೇನಾಧಿಪತಿ ಸಿಂಗಯ್ಯ ದಂಡನಾಯಕನ ಪ್ರಾರ್ಥನೆಯಂತೆ ಇಳತ್ತೂರು ನಾಡಿನ ಪೊಂಗಲೂರು ಗ್ರಾಮದ ಅರ್ಧ ಆದಾಯವನ್ನು ಸರ್ವಮಾನ್ಯವಾಗಿ ತಿರುವೆಂಕಟ ಮುಡಿಯಾನನಿಗೆ ಆಡಿಮಾಸದ ಉತ್ಸವವನ್ನು ನಡೆಸಲೂ, ಮಹಾ ಪ್ರಧಾನಿ ರಾಚಯ್ಯ ದಂಡನಾಯಕನ ಹೆಸರಿನಲ್ಲಿ ಸಿತಕರಗಂಡನ್ ಸಂಧಿಯಲ್ಲಿ ನಿಮಂದನಕ್ಕಾಗಿಯೂ ಆಗುವ ವೆಚ್ಚಗಳನ್ನು ತೂಗಿಸಲು ದಾನವಾಗಿ ನೀಡಿದನು ಆತನ ಆಡಳಿತದ 8 ನೇ ವರ್ಷದ ಆಡಿಮಾಸದಲ್ಲಿ ಈ ದತ್ತಿಯನ್ನು ನೀಡಿದ್ದು ಇದು ಒಂದನೇ ವರ್ಷವಾಗಿ 9 ನೇ ವರ್ಷದ ಆಡಿ ಮಾಸದಲ್ಲಿ ಇದು ಜಾರಿಗೆ ಬರತಕ್ಕದ್ದಾಗಿದ್ದಿತು ಗ್ರಾಮವನ್ನು ದಾನ ನೀಡಲು ಕಾರಣವಾದವನು ಸಿಂಗಯ ದಂಡನಾಯಕ ಪೊಂಗಲೂರನ್ನು ಸಿಂಗಾನಲ್ಲೂರು ಗ್ರಾಮವೆಂದು ಪುನರ್ನಾಮಕರಣಗೊಳಿಸಲಾಯಿತು (ತಿ ತಿ , 195)

ತಿರುವೆಂಕಟನಾಥ ಯಾದವರಾಯನು ತನ್ನ ಹಿರಿಯರಲ್ಲಿ ಒಬ್ಬರಾದ ಯಾದವ ನಾರಾಯಣನ ಹೆಸರಿನಲ್ಲಿ ತಿರುವೆಂಕಟ ಮುಡೈಯಾನನಿಗೆ ನಾರಾಯಣನ್ ಸಂಧಿಯ ನಿಮಂದನೆಗಾಗಿ ತಿರುಪತಿಯ ಒಂದು ಗ್ರಾಮವನ್ನು (ತಿರುಮಂತ್ರಕ್ಕಣಿ) ದಾನ ನೀಡಿದ ಮೂರನೇ ಕುಲೋತ್ತುಂಗನ ಆಡಳಿತದ ಕೊನೆಗಾಲದಲ್ಲಿ ನಾಗಪುಡೋಲಿ ಗ್ರಾಮದಲ್ಲಿ ಈ ಹಿರಿಯರ ನೆನಪಿನಲ್ಲಿಯೇ ಒಂದು ವಿಗ್ರಹವನ್ನೂ, ರಾಜಮಲ್ಲದೇವ ಭುಜಬಲ ಸಿದ್ಧರಸನ್ ಅಲಿಯಾಸ್ ಯಾದವರಾಯನು ಪ್ರತಿಷ್ಠಾಪಿಸಿದನು ತಿರುಮಂತ್ರಕ್ಕಣಿಯನ್ನು ಸರ್ವಮಾನ್ಯವನ್ನಾಗಿಸಿದಾಗ ತಿರುವೆಂಕಟನಾಥನ ಆಡಳಿತದ 12 ನೇ ವರ್ಷದಲ್ಲಿ ಹಲವಾರು ತೆರಿಗೆಗಳನ್ನು ಉತ್ಪಾದನೆಯನ್ನೂ ಸಂದಾಯ ಮಾಡುವಂತಾಯಿತು ಇವುಗಳಲ್ಲಿ ವಳೈತದಿವರ್ ವರಿಯೂ ಒಂದಾಗಿದ್ದಿತು

ಈ ಶಾಸನಗಳಲ್ಲಿ ತೀರ ಈಚೆಗೆ ಕಂಡುಬರುವ ಯಾದವರಾಯನೆಂದರೆ ಓಬಳಯಾದವ ಈತ ಶ್ರೀ ವೆಂಕಟೇಶ್ವರಸ್ವಾಮಿಯ ವೈಕುಂಠ ಹಸ್ತಕ್ಕೆ ವರದ ಹಸ್ತಕ್ಕೆ ನೀಡಿದ ಚಿನ್ನದ ಕವಚದ ಕಾಣಿಕೆಯನ್ನು ಸಂಸ್ಕೃತ ತಮಿಳುಗಳೆರಡರಲ್ಲೂ (ತಿ ತಿ 56) ತಿಳಿಸಲಾಗಿದೆ ಈ ಓಬಳನಾಥನು ತಂಜೈಯ ರಾಜನೆಂದೂ, ಬಹುಶ್ರೇಷ್ಠ ವಿದ್ವಾಂಸನೂ ಆಗಿದ್ದನೆಂದು ತಮಿಳಿನ ಪದ್ಯಭಾಗ ತಿಳಿಸುತ್ತದೆ ತಮಿಳಿನ ಪದ್ಯದಲ್ಲಿ ತಿರುಮಲೆಯನ್ನು ವಡವೆಂಗಡಂ ಎಂದು ಕರೆಯಲಾಗಿದೆ ಎಂದರೆ ಉತ್ತರಕ್ಕೆ ಇರುವ ವೆಂಕಟಪರ್ವತ ವೆಂಬರ್ಥ ಇದು ಮಧುರವಾದ ಸುವಾಸನೆಯ ಮೂಲಿಕೆಗಳಿಂದಲೂ, ಸಸ್ಯಗಳಿಂದಲೂ ಕೂಡಿದ್ದಿತಂತೆ

**ತೆಲುಗು ಪಲ್ಲವರು :** ತಿ ತಿ ದೇವಸ್ಥಾನಗಳ ಶಾಸನಗಳಲ್ಲಿ ಸುಮಾರು ಒಂದು ಡಜನ್ ಶಾಸನಗಳಲ್ಲಿ ತೆಲುಗು ಪಲ್ಲವ ಮುಖ್ಯನಾದ ವಿಜಯಗಂಡಗೋಪಾಲನು ಪ್ರತಿನಿಧಿಸಲ್ಪಟ್ಟಿದ್ದಾನೆ ಇವುಗಳಲ್ಲಿ ಬಹುಪಾಲು ತ್ರುಟಿತವಾಗಿದ್ದು ಮೂರು ಮಾತ್ರವೇ ಅವನ ಆಡಳಿತದ 4, 5 ಹಾಗೂ 9 ನೆಯ ವರ್ಷಗಳನ್ನು ಸೂಚಿಸುತ್ತವೆ

ಈತನ ಆಡಳಿತವು ಜಟಾವರ್ಮ ಸುಂದರ ಪಾಂಡ್ಯ, ಕೊಪ್ಪೆರುಂಜಿಗ, ಮದುರಾಂತಕ ಪೊತ್ತಪಿ ಚೋಳ, ಅಲ್ಲಂಟಿಕ್ಕ ಹಾಗೂ ಮನುಮಸಿದ್ಧ, ಕಾಕತೀಯ ಗಣಪತಿಗಳ ಸಮಕಾಲೀನವಾಗಿದ್ದಿತು ಇವರಲ್ಲಿ ಜಟಾವರ್ಮ ಸುಂದರ ಪಾಂಡ್ಯನು ಗಂಡಗೋಪಾಲನನ್ನು ಸೋಲಿಸಿ ಕೊಂದೆನೆಂದು ಹೇಳಿಕೊಂಡರೆ ನಮ್ಮಲ್ಲಿನ ಶಾಸನಗಳು (ತಿ ತಿ 239, 241) ಈತ ವೀರ ಗಂಡಗೋಪಾಲನೆಂದೂ ಗುರುತಿಸುತ್ತವೆ (ವಿಜಯಗಂಡಗೋಪಾಲನಲ್ಲ) ಕೊಪ್ಪೆರುಂಜಿಗನು ತಾನು ವೀರಗಂಡಗೋಪಾಲ ಹಾಗೂ ವಿಜಯಗಂಡಗೋಪಾಲರುಗಳನ್ನು ಗೆದ್ದೆ ನೆಂದು ಗರ್ವದಿಂದ ಹೇಳಿಕೊಂಡದಕ್ಕೆ ಕಾರಣ ಸುಂದರ ಪಾಂಡ್ಯನು ವೀರ ಗಂಡ ಗೋಪಾಲನನ್ನು ಗೆದ್ದ ಸಮಯದಲ್ಲಿ ತನ್ನ ಬಲುಮೆಯೂ ಸೇರಿದೆ ಎಂಬ ತಮಿಳು ಪಲ್ಲವನ ಭಾವನೆಯೇ ಆಗಿರಬೇಕು (ತನ್ನಿಂದಲೇ ಪಾಂಡ್ಯನು ಗೆದ್ದನೆಂಬ ಜಂಬವೇ ಆಗಿರೆಯಷ್ಟೆ)

ತಿ ತಿ ದೇವಸ್ಥಾನಗಳ ಶಾಸನಗಳಿಂದಾಗಿ ತಿಳಿದು ಬರುವ ವಿಷಯವೆಂದರೆ ರಾಜಕುಮಾರಿ ದೇವರಸಿಯರ್ ವಿಜಯಗಂಡಗೋಪಾಲನ ರಾಣಿಯಾಗಿದ್ದು ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದಲ್ಲಿ ಮೂರು ನಂದಾದೀಪಗಳನ್ನು ಬೆಳಗಿಸಲು ಹಸುಗಳನ್ನು ದಾನ ನೀಡಿದಳೆಂದು ಹೇಳಲಾಗಿದೆ (ತಿ ತಿ 73, 431) ತಿ ತಿ 173 ರಲ್ಲಿ ವಿಜಯಗಂಡಗೋಪಾಲನ ಆಸ್ಥಾನದಲ್ಲಿ ಅಧಿಕಾರಿಯಾಗಿದ್ದ ಕಾಶ್ಯಪಗೋತ್ರದ ಅಮ್ಮಯ್ಯಪ್ಪ ಅಥವಾ ಅಣ್ಣನ್ ಪರಿಮಳಪ್ರಿಯನ್ ಸ್ವಾಮಿಯ ಸನ್ನಿಧಿಯಲ್ಲಿ ಒಂದು ದೀಪವನ್ನು ಸ್ಥಾಪಿಸಿ, ಅದನ್ನು ಬೆಳಗಿಸಲು ತುಪ್ಪಕ್ಕಾಗಿ 32 ಹಸುಗಳನ್ನೂ, ಒಂದು ಗೂಳಿಯನ್ನೂ ದಾನ ಮಾಡಿದನೆಂದು ಹೇಳಿಕೆಯಿದೆ ತಿ ತಿ 111 ರ ಪ್ರಕಾರ ನಾರಾಯಣಪುರದ ವಣಿಕ ಕಟ್ಟಾರಿಯ ಮಗನಾದ ಅಮರಕೋನ್‌ನು ಒಂದು ದೀಪವನ್ನು ದಾನ ಮಾಡಿ, ಅದರ ಕಂಬಕ್ಕಾಗಿ ಮೂರು ಮಡೆಯನ್ನೂ ಕರ್ಪೂರಕ್ಕಾಗಿ 12 ಮಡೆಯನ್ನು ದಾನ ನೀಡಿದ್ದುಂಟು ವಿಜಯ ಗಂಡ ಗೋಪಾಲನ ಆಡಳಿತದ 7 ನೇ ವರ್ಷದಲ್ಲಿ ಕಾಂಜೀವರದ ಅರುಳಾಳಪೆರುಮಾಳ್ ಆಲಯಕ್ಕೆ ಹಸುಗಳನ್ನೂ ಗೂಳಿಗಳನ್ನೂ

ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

**ಒಂದು ವಿನಂತಿ;**

ಸಸಿಯೊಂದ ಬೆಳೆವವನು ದೇವರಾ ಸೇವಕನು
ತಲೆಮಾರು ಗಳಿಗೆಲ್ಲ ನೆರಳನವ ಹರಿಸುವನು
ಹರಸುವರು ಜನರವನ, ಅವನೆಂದು ಕಾಣದರು

ತಿರುಮಲೆಯ ಪವಿತ್ರವಾದ ಅರಣ್ಯ ಶ್ರೀ ವೆಂಕಟೇಶ್ವರಸ್ವಾಮಿಯು ಮಾನವ ಜನಾಂಗಕ್ಕೆ ನೀಡಿದ ಅಮೂಲ್ಯ ವರದಾನ ಈ ಒಂದು ಸೂಕ್ಷ್ಮವೂ ಸುಂದರವೂ ಆದ ಅರಣ್ಯ ಪರಿಸರ ರಕ್ಷಣೆ ಮಾಡಲೆಂದು ತಿರುಮಲೆ - ತಿರುಪತಿ ದೇವಸ್ಥಾನಗಳವರು ಉತ್ತಮವಾದ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯನ್ನು ಆರಂಭಿಸಿದ್ದಾರೆ ಈ ವನಾಭಿವೃದ್ಧಿಯೋಜನೆಯ ಹಲವು ವಿವರಗಳು ಹೀಗೆ ಇವೆ

## ವೃಕ್ಷ ಸಂವರ್ಧನೆ

ಈ ಯೋಜನೆಯನ್ವಯ ಪವಿತ್ರವಾದ ಸಪ್ತಗಿರಿಗಳಲ್ಲಿ ಐದುನೂರು ಗಿಡಗಳನ್ನು ನೆಡಲಾಗುವುದು

ಪ್ರಯೋಜನಗಳು
* ಗಿಡಗಳ ಈ ತೋಪಿಗೆ ದಾನಿಯು ಅಪೇಕ್ಷಿಸಿದ ಹೆಸರನ್ನಿಡಲಾಗುವುದು
* ಗಿಡಗಳನ್ನು ಐದುವರ್ಷಗಳ ವರೆಗೆ ಆರೈಕೆ ಮಾಡಿ ನೋಡಿಕೊಳ್ಳಲಾಗುವುದು
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ

ದಾನದ ಮೊಬಲಗು **ರೂ. 25000.**

## ವೃಕ್ಷ ಪ್ರಸಾದ

ಈ ಯೋಜನೆಯನ್ವಯ ತಿರುಮಲೆಯಲ್ಲಿ ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಗಿಡಗಳನ್ನು ಬೆಳೆಸಲಾಗುವುದು

ಪ್ರಯೋಜನಗಳು
* ಪ್ರತಿವರ್ಷ ದಾನಿಯ ಹೆಸರಿನಲ್ಲಿ ನೂರು ಹೂ ಹಣ್ಣು ಬೆಳೆಯುವ ಗಿಡಗಳನ್ನು ವಿತರಿಸುವುದು
* ಹತ್ತು ವರ್ಷಗಳವರೆಗೆ ಪ್ರತಿವರ್ಷ ಹಂಚುವಿಕೆ
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ

ದಾನದ ಮೊಬಲಗು **ರೂ. 15000.**

## ಸ್ಮಾರಕ ವನಗಳು

ಈ ಯೋಜನೆಯಡಿಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಸಪ್ತಗಿರಿಗಳಲ್ಲಿ ಯಾವುದಾದರೂ ಒಂದು ಜಾತಿಯ ಹತ್ತು ಗಿಡಗಳನ್ನು ಒಂದು ಕಡೆ ನೆಟ್ಟು ಐದು ವರ್ಷ ಬೆಳೆಸಲಾಗುವುದು

ಪ್ರಯೋಜನಗಳು
* ತೋಪಿಗೆ ದಾನಿಯ ಹೆಸರನ್ನಿಡಲಾಗುವುದು
* ಗಿಡಗಳನ್ನು ಐದು ವರ್ಷ ಆರೈಕೆಯಿಂದ ನೋಡಿಕೊಳ್ಳಲಾಗುವುದು
* ಈ ಮೊತ್ತದ ದಾನವು ನೂರು ಶತಾಂಶ ಆದಾಯಕರ ಮುಕ್ತ

ದಾನದ ಮೊಬಲಗು : **ರೂ. 5000.**

## ವನ ಸಂರಕ್ಷಣ ಭಾಗಸ್ವಾಮ್ಯ

ತಿರುಮಲೆಯ ಅರಣ್ಯಾಚ್ಛಾದನೆಯನ್ನು ರಕ್ಷಿಸಿ ಬೆಳೆಸುವ ಯೋಜನೆಯಿದು

ಪ್ರಯೋಜನಗಳು
* ದಾನಿಯ ಹೆಸರಿನ ಪ್ರಕಟನೆ
* ನೂರು ಶತಾಂಶ ಆದಾಯಕರ ಮುಕ್ತದಾದದ್ದು ಈ ದಾನ

ದಾನದ ಮೊಬಲಗು **ರೂ. 2000.**

ತಮ್ಮ ದಾನಗಳನ್ನು ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ - ಇವರ ಹೆಸರಿಗೆ ಡಿ ಡಿ ಯ ರೂಪದಲ್ಲಿ ಕಳುಹಿಸಿ.

**ಕಾರ್ಯನಿರ್ವಹಣಾಧಿಕಾರಿ.**

ಿಡಿದ ಅಲಪ್ಪುರದ ದೇವಿಸೆಟ್ಟಿಯ ಮಗನಾದ ಕಾಕ ಯ ಗಣಪತಿಯ ಮಂತ್ರಿಗಳಲ್ಲಿ ಒಬ್ಬನಾದ ಬ್ರಹ್ಮ ಟ್ಟಿಯು (ಮದರಾಸು ಶಾಸನ ಸಂಪುಟದಲ್ಲಿ 47 ಯದು - 1893) ತಿ ತಿ 296 ರಲ್ಲಿ ಕಂಡು ಂದು ಬ್ರಹ್ಮನಾರಾಯಣ ಮತ್ತಿತರ ಸ್ಥಳೀಯ ಶ್ರೀ ಷ್ಣವರ ಮೂಲಕ ದಾನವನ್ನು ನೀಡಿದಂತೆ ತಿಳಿಯು ುತ್ತದೆ ಈತ ಪೊಕ್ಕನ್ - ಖಜಾಂಚಿ - ಎಂದು ಸರಿಸಲ್ಪಟ್ಟು ಬಹುಶಃ ಗಣಪತಿಯ ಅಧೀನದಲ್ಲಿ ಅಧಿಕಾರವನ್ನು ಪಡೆದಿದ್ದ

ತಿ ತಿ 128 ರಲ್ಲಿ ಕಂಡುಬರುವ ತ್ರಿಪುರಾಂ ಕ ತೆಲುಗುಪಲ್ಲವ ಮದುಸೂದನ ದೇವನ ತಂದೆ ಾದ ಮಹಾಮಂಡಲೇಶ್ವರ ತ್ರಿಪುರಾಂತಕದೇವ ಾಗಿದ್ದಾನೆ

ತಿ ತಿ 72 ತಮಿಳಿನಲ್ಲಿದ್ದು ರಾಜಗಂಡಗೋಪಾ ನು ಜಗವೆಲ್ಲ ಹೊಗಳುವ ಶ್ರೇಷ್ಠ ಜನಾನುರಾಗಿ ಾಗಿದ್ದನೆಂದು ತಿಳಿಸಿದರೂ ಈತ ಯಾವ ವಂಶ ವನೆಂದಾಗಲೀ ಯಾವ ರಾಜನೆಂದಾಗಲೀ ತಿಳಿ ಪುದಿಲ್ಲ ಪ್ರಾಯಶಃ ಈತ ತೆಲುಗುಪಲ್ಲವನಾದ ಜಯಗಂಡಗೋಪಾಲನ ಬಂಧುವಾಗಿರದೇಕು

## ಆರ್ಥಿಕ ಪರಿಸ್ಥಿತಿ

**ತೆರಿಗೆ ಪದ್ಧತಿ :** ತಿರುಪತಿಯ ಕಡೆಯಿಂದ ್ರೀ ವೆಂಕಟೇಶ್ವರಸ್ವಾಮಿ ಆಲಯಕ್ಕೆ ಸಂದಾಯವಾ ುತ್ತಿದ್ದ 40 ಕ್ಕೂ ಹೆಚ್ಚಿನ ಬಗೆಯ ತೆರಿಗೆಗಳು ವರ್ಗೀ ೃತವಾಗಿ ಜಿ ಟಿ 11 ರಲ್ಲಿ ವಿವರಣೆಗೆ ಒಳಗಾಗಿವೆ ಇವುಗಳಲ್ಲಿ ಪೊನ್‌ವರಿಯು ಚಿನ್ನದ ರೂಪದಲ್ಲಾ ಿದ್ದಿತು ಧಾನ್ಯದ ತೆರಿಗೆಗಳು ಕಂಡಮಯ್ಯಂ ಆಗಿ ತ್ತಿತು ಉಚಿತ ಸೇವೆಯ ಬಗ್ಗೆಯಿದ್ದ ತೆರಿಗೆಯನ್ನು ಮಂಜಿ ವಗ್ಯೆಯೆಂದೂ, ಕರೆದರು ನಾಟ್ಟಾರರ ಕಡೆಯಿಂದ ವಸೂಲಿ ಮಾಡುತ್ತಿದ್ದವುಗಳೂ ರಾಜ ಿಂದ ವಿಧಿಸಲ್ಪಟ್ಟ ಹೊಸ ಹಳೆಯ ತೆರಿಗೆಗಳೂ ವರ್ಗೀಕೃತವಾಗಿವೆ ತಿ ತಿ 189 ಹಾಗೂ ಜಿ ಟಿ 11 ರಲ್ಲಿ ಹೇಳಲಾಗಿರುವ ಹಲವು ತೆರಿಗೆಗಳು ಪ್ರಾಣಿ ಗಳ ಮೇಲೆ ವಿಧಿಸಿದವು, ಹಲವು ರಸ್ತೆ ಸುಂಕ ಅಥವಾ ಉಕ್ಕಡ ತೆರಿಗೆಗಳು ವ್ಯಾಪಾರಿಗಳು, ನೇಕಾರರು, ಗಾಣಿಗರ ಮೇಲೆ ವಿಧಿಸಿದ ವೃತ್ತಿ ತೆರಿಗೆಗಳು, ಉಪ ವನ ನಿರ್ಮಾಣದ ತೆರಿಗೆ, ಮೀನು ಹಿಡಿಯುವ ತೆರಿಗೆ, ಅಲೆಮಾರಿ ರಾಸುಗಳ ದಂಡ, ಮೊದಲಾ ದವೂ ಇದ್ದವು, ಇವುಗಳು ಮಧ್ಯಕಾಲೀನ ಚರಿತ್ರೆಯ ಲ್ಲಿನ ಪಶ್ಚಿಮ ರಾಷ್ಟ್ರಗಳಲ್ಲಿ ಜಾರಿಯಲ್ಲಿದ್ದ ಸಾಮಂತ ಕಾಣಿಕೆಗಳಂತೆಯೇ ಇದ್ದವು ಪ್ರಾಚೀನ ಸಂಪ್ರದಾ ಯದ ಮೂರರಲ್ಲಿ ಎರಡು ನೆರವುಗಳನ್ನು - ತಿರುಮ ಗನಾರ್ ಕಾಣಿಕ್ಕೆ, ತಿರುತ್ತಾಯಾರ್ ಕಾಣಿಕ್ಕೆ - ಗಳನ್ನು ಈ ಪಟ್ಟಿಯಲ್ಲಿ ಪ್ರಸ್ತಾಪಿಸಲಾಗಿದೆ (ರಾಜ್ಯದ ಉತ್ತ ರಾದಿಕಾರಿ ಹಾಗೂ ರಾಜಮಾತೆಯರ - ರಾಣಿಯ ಬಳಕೆಗಾಗಿ ವಸೂಲಾಗುತ್ತಿದ್ದ ತೆರಿಗೆಗಳು ಮೂರ ನೆಯ ನೆರವು - ರಾಜನು ಶತ್ರುಗಳ ಸೆರೆಸಿಕ್ಕಾಗ ಬಿಡಿ ಸಲು ಕೊಡಲಾಗುತ್ತಿದ್ದ ದನದ ಇಡುಗಂಟು - ಈ ಸಂದರ್ಭದಲ್ಲಿ ವಲ್ಲಾಲದೇವರ್ ವರಿ - ವಸೂಲಿ ಮಾಡಲ್ಪಟ್ಟು, ಯಾದವರಾಯನಿಂದ ಆಕ್ರಮಿಸಿದ ಹೊಯ್ಸಳರಿಗೆ ನೀಡುವಂತಿದ್ದಿತು

ಸಂದಾಯವಾಗುತ್ತಿದ್ದ ತೆರಿಗೆಗಳು ಈ ರೀತಿಯಿ ದ್ದವು.

ಪಂಡಿವರಿ, ಪಳವರಿ, ವೇಂಡುಕೋಳ್‌ವರಿ, ಮಲೆಯಮಂಜಿ, ಕುದಿರೈವರಿ ಕಣಕ್ಕ ಮೋವೈ, ನಾಟ್ಟುವರಿ, ನಿಲೈಕ್ಕಾಣಿಕ್ಕೆ, ನಾಟ್ಟಾರ್ ವೈತ್ತ ಕಾಣಿಕ್ಕೆ, ವಲಿನಡೈ ಕಾಣಿಕ್ಕೆ, ಅಕ್ಕನ್ ಕಾಣಿಕ್ಕೆ, ಕಾರ್ತಿಕೈ ಕಾಣಿಕ್ಕೆ, ಪಟ್ಟಿವರಿ, ವಿರುತ್ತ ವಗ್ಯೆ ಪಳತಲೈಕ್ಕು - ಮಾಡೈಯಿಲ್ ಕೊಳ್ಳುಂ (ವರಿ), ನಾಟ್ಟಾರ್ ಮಡೈ ಯಿಲ್ ವಗಕ್ಕುಂವರಿ, ವಲ್ಲಾಳ ದೇವರ್ ವರಿ, ವಾಸಲ್ ಪಣಂ, ತಲೈಪಣಂ, ನಿಶ್ಚಯಿಪ್ಪು ಮುಖಂ ಪಾರ್‌ವ್ವ, ಪಡಿಯರಿಮೋವೈ, ಮುಖಂ ಪಾರ್ವೈಚ ಮ್ಮದಂ, ಸಂಬವ ಚಮ್ಮದಂ, ಸೆಟ್ಟಿಕಲ್, ವಾಣಿಕಲ್, ಸೇನೈಯಂಗಾಡಿಯರ್, ಸೆಕ್ಕುಕುಡಿಮಕ್ಕಲ್ ಕೈಕೋ ಲರ್‌ಪೆರ್, ಸುಂಕವರಿ, ಕೊಲ್ಲಂ ವಗ್ಯೆ, ಸುಂಕ ಎಣ್ಣೈ ಶಿಲ್ಕೈಕಲ್ ಕಾಣಿಕ್ಕೆ

ಮೇಲಿನ ಶಾಸನವು ತೊಂಡಮಂಡಲದ ಸ್ಥಳೀಯ ರಾಜನಾದ ತಿರುವೆಂಕಟನಾಥ ಯಾದ ವರಾಯನು ತಿರುಪತಿ ಗ್ರಾಮವನ್ನು ಸರ್ವಮಾನ್ಯ ಗ್ರಾಮವಾಗಿ ನಾರಾಯಣನ್ ಸಂದಿಯಲ್ಲಿ ದೇವ ರಿಗೆ ನಿವೇದನೆ ನೀಡಲೆಂದು ಹಾಕಿಸಿದ್ದು ತಿರುಮ ಲಯ ಆಲಯದ ಸ್ಥಾನತ್ತಾರರಿಗೆ ಈ ವಿಷಯವನ್ನು ತಿಳಿಸಿ ನಡೆಸಬೇಕಾದ ಕ್ರಮಗಳೆಲ್ಲದಕ್ಕೂ ನಿರ್ದೇಶನ ನೀಡಲಾಗಿದೆ ತಿರುಪತಿ ಗ್ರಾಮದಲ್ಲಿ ಹಲವಾರು ಸ್ಥಳೀಯ ತೆರಿಗೆಗಳು ಸಂದಾಯವಾಗುತ್ತಿದ್ದಿತೆಂಬು ದನ್ನು ಗಮನಿಸಬಹುದು

ನೀರಿನ ಸರಬರಾಜು ತಿರುವೆಂಕಟನಾಥ ಯಾದವರಾಯನು ಶ್ರೀವೆಂಕಟೇಶ್ವರ ಸ್ವಾಮಿಗೆ ನೀಡಿದ ಸರ್ವಮಾನ್ಯಗ್ರಾಮ ತಿರುಪತಿ ಆದರೆ ಗ್ರಾಮದ ಪರಿಯೇರಿಯ (ದೊಡ್ಡ ಕೆರೆ) ಉತ್ತರ ಕಾಲುವ ಬಳಿಯಿದ್ದ ಸ್ವಲ್ಪ ಸ್ಥಳ ಎಂಬೆರುಮಾನರಿಗೆ - ಭಗವದ್ರಾಮಾನುಜರಿಗೆ - ಅವರ ನಿತ್ಯ ಪೂಜೆ ಗಾಗಿ ಮೀಸಲಾಗಿ ದಾನವಾಗಿದ್ದಿತು ಈ ಸ್ಥಳ ಅವ ಜ್ಞೆಗೆ ಗುರಿಯಾಗಿ ಪೊದೆ ಪೊಟರೆಗಳು, ಮುಳ್ಳುಗಿಡ ಗಳೂ ಬೆಳೆದಿದ್ದವು. ಶ್ರೀ ರಂಗನಾಥನ ಆಡಳಿತದ ಮೂರನೆಯ ವರ್ಷದಲ್ಲಿ ಈ ಜಮೀನಿನ ಕಳೆ ಕಸ ವನ್ನು ತೆಗೆಸಿ ಭೂಮಿಯನ್ನು ಹಸನು ಮಾಡಿ ಸಾಗು ವಳಿಯೋಗ್ಯ ಭೂಮಿಯನ್ನಾಗಿಸಿ ನೀರಾವರಿ ಸೌಲ ಭ್ಯವೊದಗಿಸಲಾಯಿತು ದೇವಮಾನ್ಯವಾದ ಗ್ರಾಮ ದೊಡನೆಯೇ ಪೆರಿಯೇರಿಯೂ ತಿರುವೆಂಕಟಮು ಡೈಯಾನನಿಗೇ ಸೇರಿದ್ದುದರಿಂದ ಅದರ ನೀರನ್ನು ಯಾವುದೇ ಪರಿಹಾರವನ್ನೂ ನೀಡದೆ ಎಂಬೆರುಮಾ ನರಿಗೆ ಸೇರಿದ ಭೂಮಿಯ ಸಾಗುವಳಿಯಲ್ಲಿ ಬಳ ಸುವಂತಿರಲಿಲ್ಲ ಹೀಗಾಗಿ ಪರಿಹಾರ ರೂಪದಲ್ಲಿ ತಿರುವೆಂಕಟ ಮುಡೈಯಾನನಿಗೆ 200 ಪಣಗಳ ತಿರುಮುನ್ ಕಾಣಿಕೆಯಾಗಿ ಸಲ್ಲಿಸಲಾಯಿತು ಆ ನಂತರವೇ ತಿರುಪತಿಯ ಇತರ ಜಮೀನುಗಳ ವಿಷ ಯದಲ್ಲಿದ್ದ ಪದ್ಧತಿಯಂತೆ ಪೆರಿಯೇರಿಯ ನೀರನ್ನು ಈ ರಾಮಾನುಜರ ಭೂಮಿಯ ಕೃಷಿಗೆ ಬಳಸಲಾ ಯಿತು (ಜಿ ಟಿ 115)

**ಧಾರ್ಮಿಕ ದತ್ತಿಗಳು :** ಈ ಕಾಲದಲ್ಲಿ ಬಹು ತೇಕ ಧಾರ್ಮಿಕ ದತ್ತಿಗಳು ನಂದಾದೀಪದ ದೆಳಗಿ ಸುವಿಕೆಗೆ ಸಂಬಂಧಿಸಿದ್ದವನ್ನು ಕಾಣಬಹುದು ವಿಜ ಯನಗರದರಸರ ಕಾಲದಲ್ಲಿ ಪದ್ಧತಿಯಾಗಿ ಬೆಳೆದ ಉತ್ಸವ, ನಿವೇದನೆಗಳಿಗಾಗಿ ದತ್ತಿ ನೀಡುವಿಕೆಯ ಆರಂಭ ಕಾಲವನ್ನು ಮಾತ್ರ ಇಲ್ಲಿಯೇ ನೋಡಬ ಹುದು ಈ ಮಾತಿಗೆ ತಿ ತಿ 111, 121, 134, 139, 141, 285, 433 ಹಾಗೂ ಜಿ ಟಿ 127 ಶಾಸನಗಳು ಉದಾಹರಣೆಗಳಾಗುತ್ತವೆ ಧಾನ್ಯ ವನ್ನು ಅಳೆಯುವ ಅಳತೆಗೋಲು ತುಂಬು ಆಗಿದ್ದು ವಟ್ಟಿ, (ಪುಟ್ಟಿ-ಬುಟ್ಟಿ) ಎಂಬುದು ತುಂಬುದಿನ ಗಣ ಕವಾಗಿದ್ದಿತು ಶ್ರೀ ಗೋವಿಂದರಾಜಸ್ವಾಮಿ ಆಲ ಯದಲ್ಲಿ ಚಲುಕ್ಕಿ ಅಥವಾ ಚಾಲುಕ್ಯ ನಾರಾಯಣ ಕಲ್ (ಜಿ ಟಿ 127) ಎಂಬ ಅಳತೆ ಪ್ರಧಾನವಾಗಿ ದ್ದಿತು ತಿರುಮಲೆಯಲ್ಲಿ ಮಲೈಕುನಿಯ ನಿನ್ರಾನ್ ಕಲ್ ಅಥವಾ ಉಚ್ಚೆಯಿಲ್ ನಿನ್ರಾಲ್ ಕಲ್ (ಮರ ಕ್ಕಲ್) ಎಂಬ ಅಳತೆ ಪ್ರಚಲಿತವಿದ್ದಿತು (ತಿ ತಿ 137) ಎರಡು ಚಾಲುಕ್ಯ ನಾರಾಯಣ ಕಲ್‌ಗಳು ಒಂದು ಮರಕ್ಕಲ್ ಆಗಿರುತ್ತಿತ್ತು ಆ ಕಾಲದ ನಾಣ್ಯ ಗಳು ವರಾಹ ಪಣಂ ಹಾಗೂ ಮಡೈಗಳಾಗಿದ್ದವು. ಮಡೈಯೆಂಬುದು ತೆಲುಗು ಪಲ್ಲವರಾಜ ವಿಜಯ ಗಂಡಗೋಪಾಲನು ಜಾರಿಗೆ ತಂದ ಚಿನ್ನದ ನಾಣ್ಯ ವಾಗಿದ್ದಿತು ಹೀಗಾಗಿ ಇದನ್ನು ಗಂಡ ಗೋಪಾ

ಲನ್ ಮಡ್ಡೈ (ತಿ ತಿ 143) ಎಂದೇ ಕರೆಯಲಾಯಿತು ಇದರ ಹೊಸರೂಪವನ್ನು ಗಂಡಗೋಪಾಲನ್ ಪುದು ಮಡ್ಡೈ ಎಂದು ಕರೆಯಲಾಯಿತು ಎರಡೂ ನಾಣ್ಯಗಳಲ್ಲಿ ಹಳೆಯದಾದ ಪಳಂ ಪುಲಿ ಮಡ್ಡೈಯು ಏಳೂವರೆ ವರಾಹ ಪಣಂಗೆ ಸಮನಾಗಿದ್ದಿತು (ತಿ ತಿ 126) ಇಡೀ ಜಯಗೊಂಡ ಚೋಳ ಮಂಡಲದಲ್ಲಿ ಚಿನ್ನದ ನಾಣ್ಯ ಪ್ರಚಲಿತವಾಗಿದ್ದು ಇದು ಪೂರ್ಣ ಶುದ್ಧ ಚಿನ್ನದ್ದಾಗಿದ್ದಿತು (ತಿ ತಿ 129)

ಸಾಲೀಯ ಶ್ರೀವೈಷ್ಣವರು . ಶ್ರೀ ವೈಷ್ಣರಲ್ಲಿ ಒಂದು ಪಂಗಡದವರು ನೇಕಾರರಿದ್ದು ತಮ್ಮನ್ನು ತಾವು ಸೌರಾಷ್ಟ್ರ ಬ್ರಾಹ್ಮಣರೆಂದು ಕರೆದುಕೊಳ್ಳುವ ಸಾಲೀಯ ಶ್ರೀವೈಷ್ಣವರಲ್ಲಿ ಹಲವರು ವಿಷ್ಣುಗೋತ್ರ (ತಿ ತಿ 125) ಹಲವರು ಕಶ್ಯಪಗೋತ್ರ (ತಿ ತಿ 129) ಮತ್ತೂ ಹಲವರು ಆತ್ರೇಯ (ತಿ ತಿ 141) ಗೋತ್ರದವರಾಗಿದ್ದು ಇವರಲ್ಲಿನ ಆತ್ರೇಯ ಗೋತ್ರದವರು ವಿಕ್ರಮದೇವಿಪುರದವರೂ, ಮಿಕ್ಕವರು ಸ್ಥಳೀಯರೂ ಆಗಿದ್ದಿರಬೇಕು

(ಮುಂದುವರೆಯುವುದು)

(26 ನೇ ಪುಟದಿಂದ)

ದಲ್ಲಿ ಸಮಾಧಾನಗೊಳಿಸಬೇಕಾಗಿರುವುದು ಮಾತ್ರ ಅಜ್ಜನ ಉದ್ದೇಶ್ಯ

ಇದು ಯಾವುದೇ ಹೊಣೆ ಇಲ್ಲದ ಪ್ರೀತಿ ಇದರಿಂದ ಮಗುವಿನ ಮನಸ್ಸಿನ ಮೇಲೆ ಆಗುವ ಪರಿಣಾಮವೆಂದರೆ ಮಗುವಿಗೆ ತನ್ನ ಆಸೆಯನ್ನು ಹೇಗಾದರೂ ತೀರಿಸಬಲ್ಲ ಮಾರ್ಗ ತೋರಿದಂತಾಗುತ್ತದೆಯೋ ವಿನಹ ಅದು ತಾನು ಎಲ್ಲಕ್ಕೂ ಆಸೆ ಪಡಬಾರದೆಂಬ ಬಗ್ಗೆ ಚಿಂತಿಸಲು ಆಸ್ಪದವೇ ಇಲ್ಲದಂತೆ ಮಾಡಲಾಗುತ್ತದೆ ಅದರೊಂದಿಗೆ ಬೆಲ್ಲಕ್ಕಿಂತ ಮಿಠಾಯಿ ರುಚಿಕರವಾಗಿ ಕಾಣುತ್ತದೆ ಬೆಲ್ಲ ಕೇಳಿದ ಮಗು ಮಿಠಾಯಿ ಕೇಳಲು ಪ್ರಾರಂಭಿಸಿದಾಗ ಅದನ್ನು ತಾಯಿ, ತಂದೆ ತೆಗೆದುಕೊಡದಿದ್ದರೆ ಹಣ ಕೊಟ್ಟು ಅಂಗಡಿಯಲ್ಲಿ ಪಡೆಯಬಹುದೆಂದು ಗೊತ್ತಿರುವುದರಿಂದ ಹಣಕ್ಕಾಗಿ ಕೇಳುತ್ತದೆ ಹಣ ಕೊಡದಿದ್ದಾಗ ಕದಿಯುತ್ತದೆ ಹೀಗೆ ಕಳವಿನ ಸ್ವಭಾವ ಬೆಳೆದಂತೆ, ತಾವು ಹಣ ತೆಗೆದುಕೊಂಡಿದ್ದರೂ, ತಂದೆ ತಾಯಿ ಶಿಕ್ಷಿಸಬಹುದೆಂಬ ಭೀತಿಯಲ್ಲಿ ಸುಳ್ಳು ಹೇಳುತ್ತದೆ

ಸುಳ್ಳು ಎಂದರೆ - ಮಗುವಿಗೆ ಮನಸ್ಸಿನಲ್ಲಿ ಗೊತ್ತು ತಾನೇ ಹಣ ತೆಗೆದುಕೊಂಡಿರುವೆ ಎಂದು ಆದರೆ ಹೇಳಿದರೆ ತಂದೆ ಅಥವಾ ತಾಯಿ ಹೊಡೆಯುತ್ತಾರೆಂಬ ಭೀತಿ ಆದ್ದರಿಂದ ಹೇಳುವುದನ್ನು ಬೇರೆಯಾಗಿ ಹೇಳುತ್ತದೆ ಇಲ್ಲಿ ಮನಸ್ಸಿನಲ್ಲಿರುವುದೇ ಬೇರೆ ಹೇಳುವುದೇ ಬೇರೆ ಮಾಡುವುದೇ ಬೇರೆ

ಇದೇ ಮನುಷ್ಯನ ಕಳವು ಸ್ವಭಾವಕ್ಕೆ ಬೀಜರೂಪವಾಗಿ ಆಗುವ ಸಂಸ್ಕಾರ ಇದು ಒಂದು ಕೇವಲ ಉದಾಹರಣೆ ಅಷ್ಟೆ. ಇದೇ ರೀತಿ ನಮ್ಮ ಜೀವನದಲ್ಲಿ ಬರುವ ಮನಸ್ಸಿನಲ್ಲಿರುವುದು ಒಂದಾದರೆ ಮಾಡುವುದೇ ಮತ್ತೊಂದು ಆಗುವ ಅನೇಕ ಉದಾಹರಣೆಗಳು ಸಿಗದೆ ಇಲ್ಲ ಇದು ಧರ್ಮಾತ್ಮರ ಲಕ್ಷಣವಲ್ಲ ಮನಸ್ಸಿನ ಮಾತು ಮತ್ತು ನಡತೆ ಒಂದೇ ಆಗಿರುವಂತೆ, ತಮ್ಮ ಮನಸ್ಸಿಗೆ ಶಿಕ್ಷಣವನ್ನು ಕೊಟ್ಟಿರುವವರೇ ಮಹಾತ್ಮರು



## ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿ ಸೌಲಭ್ಯ



ತಿರುಮಲೆಗೆ ಆಗಮಿಸುವ ಯಾತ್ರಿಕರಿಗೆ ವಸತಿ ಸೌಲಭ್ಯವನ್ನು ಒದಗಿಸಲು ತಿ ತಿ ದೇವಸ್ಥಾನಗಳು ಸಾಕಷ್ಟು ಪ್ರಯತ್ನ ಪಡುತ್ತಿದೆ ಇಲ್ಲಿ ಹಲವಾರು ದೊಡ್ಡ ದೊಡ್ಡ ಸತ್ರಗಳಿದ್ದು, ಅವುಗಳಲ್ಲಿನ ಖಾಲಿ ಕೋಣೆಗಳಲ್ಲಿ ಯಾತ್ರಿಕರು ಸಾಕಷ್ಟು ಅನುಕೂಲವಾಗಿ ತಂಗಲು ಸಾಧ್ಯವಿದೆ ಇವುಗಳಲ್ಲಿ ನೀರು ವಿದ್ಯುತ್ ಉಚಿತ ಉಚಿತ ವಸತಿಗಾಗಿ ಯಾತ್ರಿಕರು ತಿರುಮಲೆಯ ಬಸ್ ನಿಲ್ದಾಣದ ಸಮೀಪವಿರುವ ಕೇಂದ್ರ ಸ್ವಾಗತ ಕಚೇರಿಯಲ್ಲಿ ವಿಚಾರಿಸಬಹುದು. ಯಾತ್ರಿಕರು ವಿಶ್ರಾಂತಿ ಪಡೆಯಲು ವಿಶಾಲವಾದ ಷೆಡ್‌ಗಳನ್ನೂ, ಗಾಳಿ ಬೆಳಕಿನ ಸಾಮೂಹಿಕ ವಿಶ್ರಾಂತಿ ಮಂಟಪಗಳನ್ನೂ ನಿರ್ಮಿಸಲಾಗಿದೆ ಶುಲ್ಕ ಸಹಿತ ವಸತಿಯನ್ನು ಕೇಂದ್ರ ಸ್ವಾಗತ ಕಚೇರಿಯಲ್ಲಿ ಏರ್ಪಾಡು ಮಾಡಲಾಗುವುದು. ಯಾತ್ರಿಕರು ತಮ್ಮ ವಸತಿಯನ್ನು ಮೊದಲೇ ರಿಸರ್ವ್ ಮಾಡಿಸಲು - ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ., ತಿರುಪತಿ - ಇವರ ಹೆಸರಿನಲ್ಲಿ ರೂ 100/- ರ ಡಿ ಡಿ ಯನ್ನು ಪಡೆದು ತಾವು ತಿರುಮಲೆಗೆ ಬರುವ ದಿನ, ಬರುವ ಜನ ಎಷ್ಟು ಎಂಬ ವಿವರಗಳನ್ನು ತಿಳಿಸುವ ಕಾಗದದೊಡನೆ ಉಪಕಾರ್ಯನಿರ್ವಹಣಾಧಿಕಾರಿ (ಸ್ವಾಗತ - I) ತಿ ತಿ ದೇ., ತಿರುಮಲೆ - 517 504 ಇವರಿಗೆ ಮೂವತ್ತು ದಿನಗಳ ಮೊದಲು ಕಳುಹಿಸಬೇಕು

### ಶ್ರೀ ಪದ್ಮಾವತೀ ಅತಿಥಿ ಗೃಹದ ಸಮೀಪ

**ಆಂಪ್ರೋ ಅತಿಥಿಗೃಹ :**

| | | |
|---|---|---|
| ದೊಡ್ಡ ಸೂಟ್‌ಗಳು-(2) | ಪ್ರತಿಯೊಂದಕ್ಕೆ | ರೂ 1000/- |
| ಕಿರಿಯ ಸೂಟ್ | | ರೂ 500/- |
| ಬಾಲಕುಟೀರ(6 ಸೂಟ್) | ಒಂದಕ್ಕೆ | ರೂ 500/- |
| ಗೋಯಂಕ(6 ಸೂಟ್) | ಒಂದಕ್ಕೆ | ರೂ 500/- |
| ಗೋದಾವರೀ ಸದನ(3 ರೂಂ) | ಒಂದಕ್ಕೆ | ರೂ 500/- |
| ಗಂಬಲ್ ಅತಿಥಿಗೃಹ(4 ಸೂಟ್) | ಒಂದಕ್ಕೆ | ರೂ 250/- |
| ಗೋಕುಲಂ ಅತಿಥಿಗೃಹ | ಒಂದಕ್ಕೆ | ರೂ 1000/- |
| ಗಾಯತ್ರಿ ಸದನ(2 ರೂಂ) | ಒಂದಕ್ಕೆ | ರೂ 2500/- |
| ಗಾಯತ್ರಿ ಸದನ(3 ರೂಂ) | ಒಂದಕ್ಕೆ | ರೂ. 1500/- |
| ಹರಿಸದನ ಅತಿಥಿಗೃಹ | | |
| (ಎ.ಸಿ ) (ಸೂಟ್-1 ರಿಂದ 7) | ಒಂದಕ್ಕೆ | ರೂ 1000/- |
| ಹಿಲ್‌ವ್ಯೂ ಅತಿಥಿಗೃಹ | | |
| (ದೊಡ್ಡ ಕೋಣೆ) | ಒಂದಕ್ಕೆ | ರೂ 100/- |
| ಹಿಲ್ ವ್ಯೂ ಅತಿಥಿಗೃಹ | | |
| (ಕಿರಿಯ ಕೋಣೆ) | ಒಂದಕ್ಕೆ | ರೂ 50/- |
| ಹಿಲ್ ವ್ಯೂ ಡಿಲಕ್ಸ್ ಕಾಟೇಜು | ಒಂದಕ್ಕೆ | ರೂ 100/- |
| ಇಂದಿರಾ ಅತಿಥಿಗೃಹ | | |
| (4ಸೂಟ್) | ಒಂದಕ್ಕೆ | ರೂ 500/- |
| ಕರ್ಮನಿವಾಸ (1 ರೂಂ) | | ರೂ 2500/- |
| ಕರ್ಮನಿವಾಸ (3 ರೂಂ) | | ರೂ. 1500/- |
| ಕರ್ಮನಿವಾಸ (2 ರೂಂ) | | ರೂ 1000/- |
| ಮೋದಿ ಭವನ (8 ರೂಂ) | ಒಂದಕ್ಕೆ | ರೂ 250/- |
| ರಾಜ್ಯಲಕ್ಷ್ಮಿ(1 ರೂಂ) | | ರೂ 1500/- |
| ರಾಜ್ಯಲಕ್ಷ್ಮಿ(4 ರೂಂ) | ಒಂದಕ್ಕೆ | ರೂ 200/- |
| ಶ್ರೀಲಕ್ಷ್ಮೀನಿಲಯ(3 ಸೂಟ್) | ಒಂದಕ್ಕೆ | ರೂ 500/- |
| ಶ್ರೀನಿಕೇತನ (3 ರೂಂ) | ಒಂದಕ್ಕೆ | ರೂ 1000/- |
| ಶ್ರೀನಿವಾಸನಿಲಯಂ (5 ರೂಂ) | ಒಂದಕ್ಕೆ | ರೂ 500/- |
| ಎಸ್ ಪಿ ಅತಿಥಿಗೃಹ (ಮೈನ್) | | |
| 2 ಮಾಸ್ಟರ್ ಸೂಟ್ | ಒಂದಕ್ಕೆ | ರೂ 1500/- |
| 7 ಇತರ ಸೂಟ್ | ಒಂದಕ್ಕೆ | ರೂ. 500/- |
| ಶಾಂತಿಸದನ (7 ಸೂಟ್) | ಒಂದಕ್ಕೆ | ರೂ. 500/- |
| ಕೃಷ್ಣ ಸದನ (5 ಸೂಟ್) | ಒಂದಕ್ಕೆ | ರೂ 500/- |
| ವಿಷ್ಣು ನಿಲಯಂ (5 ಸೂಟ್) | ಒಂದಕ್ಕೆ | ರೂ 750/- |
| ವಿಷ್ಣುನಿಲಯಂ(ಮಾಸ್ಟರ್ | | ರೂ 2500/- |
| ಸೂಟ್) | | |
| ವಿದ್ಯಾಸದನ (ಮಾಸ್ಟರ್ ಸೂಟ್) | | ರೂ 1500/- |
| ವಿದ್ಯಾಸದನ (ಇತರ ಸೂಟ್) | ಒಂದಕ್ಕೆ | ರೂ. 500/- |
| ವೆಂಕಟ ವಿಜಯಂ (6 ಸೂಟ್) | ಒಂದಕ್ಕೆ | ರೂ 1500/- |
| ವೆಂಕಟ ವಿಜಯಂ (3 ಸೂಟ್) | ಒಂದಕ್ಕೆ | ರೂ. 2500/- |
| ಶ್ರೀವಾರಿ ಕುಟೀರಂ | | |
| (ಎ ಸಿ. ಅತಿಥಿಗೃಹ) | | ರೂ 2000/- |
| ಎಸ್ ವಿ ತಿಥಿ ಗೃಹದ ಸಮೀಪ | | |
| ನಾರಾಯಣಗಿರಿ | | |
| (ವಿಶೇಷ ಕಾಟೇಜು) | ಒಂದಕ್ಕೆ | ರೂ 400/- |
| ನಾರಾಯಣಗಿರಿ | | |
| ಅತಿಥಿಗೃಹ1, 2, 3 | ಒಂದಕ್ಕೆ | ರೂ 100/- |
| ಎಸ್ ವಿ. ಅತಿಥಿಗೃಹ | | ರೂ 100/- |
| ನಾರಾಯಣಗಿರಿ ಹಾಗೂ | | |
| ಎಸ್ ವಿ ಅತಿಥಿಗೃಹ | | |

| | |
|---|---|
| ಮೂಲೆ ಸೂಟ್‌ಗಳು | ರೂ 150/- |
| ಎಚ್.ಆರ್ ಜಿ. (ಎ, ಬಿ ವಿಭಾಗ) | ರೂ 400/- |
| ಮಂಗಳಬಾವಿ ಕಾಟೇಜು (ಎಂ ಬಿ.ಸಿ ) | ರೂ 75/- |
| ಮಂಗಳಬಾವಿ ಕಾಟೇಜುಗಳು (3 ಸೂಟ್‌ಗಳು) ಒಂದಕ್ಕೆ | ರೂ 150/- |
| ವ್ಯಾಲಿವ್ಯೂಅತಿಥಿಗೃಹ(ವಿ.ವಿ ಸಿ ) | ರೂ. 75/- |
| ವ್ಯಾಲಿ ವ್ಯೂಕಾಟೇಜು (3 ಸೂಟ್) | ರೂ 150/- |

**ಉಚಿತ ಕೌಂಟರ್ :**

1. I ಎಸ್.ಸಿ. ಸುದರ್ಶನ ಸತ್ರ
2 I ಗೋವರ್ಧನ ಸತ್ರ
3 I ಕಲ್ಯಾಣಿ ಸತ್ರ
4 ಸಪ್ತಗಿರಿ ಸತ್ರಗಳು

**ಸಾಮಾನ್ಯ:**

| | |
|---|---|
| ಎ. ಎಸ್ ಸಿ | ರೂ. 15/- |
| ಜಿ ಎಸ್ ಸಿ | ರೂ 15/- |
| ಎಚ್. ಎ ಸಿ | ರೂ. 15/- |
| ಎಸ್ ಎಂ ಸಿ | ರೂ. 15/- |
| ಎಸ್ ಎಸ್ ಸಿ | ರೂ 15/- |
| ಸಪ್ತಗಿರಿ ಅತಿಥಿ ಗೃಹ | ರೂ 100/- |

**ಎ.ಆರ್.ಪಿ ಕೌಂಟರ್ :**

| | |
|---|---|
| ಎ ಟಿ.ಸಿ | ರೂ 30/- |
| ಎ.ಟಿ ಸಿ. | ರೂ 50/- |
| ಎಚ್ ವಿ.ಡಿ ಸಿ. | ರೂ 100/- |
| ಆರ್ ಬಿ ಜಿ ಎಚ್ I, III, | ರೂ 100/- |
| ವರಾಹಸ್ವಾಮಿ ಅತಿಥಿಗೃಹ | ರೂ. 100/- |

**ಟಿ.ಬಿ. ಕೌಂಟರ್ :**

| | |
|---|---|
| ಟಿ ಬಿ ಸಿ (ಒಳಗಡೆ) | ರೂ 400/- |
| ಟಿ ಬಿ ಸಿ (ಪೂರ್ತಿ ಕಾಟೇಜು) | ರೂ. 150/- |
| ಟಿ ಬಿ ಸಿ (ಅರ್ಧ ಕಾಟೇಜು) | ರೂ 75/- |
| ಟಿ ಬಿ ಸಿ (ಸೂಟ್) | ರೂ 30/- |
| ಆರ್.ಬಿ ಜಿ ಎಚ್ II | ರೂ 100/- |
| ಸುರಪುರಂ ತೋಟ ಗೆಸ್ಟ್‌ಹೌಸ್ | ರೂ 250/- |

ಮದುವೆಯಕಾಟೇಜುಗಳು
ಹಾಗೂ ಕಲ್ಯಾಣಮಂಟಪಗಳು

| | |
|---|---|
| ಎ. ಟಿ ಸಿ - 99 | ರೂ 250/- |
| ಟಿ ಬಿ ಸಿ -71, ಎ ಬಿ. 136, ಎ ಬಿ 152, ಪ್ರತಿಭಾಗ | ರೂ. 100/- |
| ಎಸ್ ಎಂ ಸಿ 226, ಎ ಬಿ 237, ಎ.ಬಿ 248, ಎ ಬಿ 260, ಎ.ಬಿ. 269, 272, ಪ್ರತಿಭಾಗ | ರೂ. 100/- |
| ಎಸ್.ಆರ್ ಎಂ ಕಲ್ಯಾಣ ಮಂಟಪ | ರೂ. 1000/- |

ಸೂಚನೆ ಮೇಲಿನ ಕಲ್ಯಾಣಮಂಟಪಗಳನ್ನು ಪಡೆಯಲು ತಿರುಮಲೆಯಲ್ಲಿನ ಎ.ಇ.ಓ (ಸ್ವಾಗತ - I) ಇವರ ಕಚೇರಿಯಲ್ಲಿ ವಿಚಾರಿಸಬೇಕು.

**ಷರತ್ತುಗಳು :**

* ಒಂದು ದಿನವೆಂದರೆ ವಸತಿಯನ್ನು ನೀಡಿದಾಗಿನಿಂದ 24 ಗಂಟೆಗಳ ಕಾಲ.
* ಮುಂಗಡ ರಿಸರ್ವ್ ಮಾಡಿಸುವಿಕೆ ಒಂದು ದಿನಕ್ಕೆ ಮಾತ್ರವೇ ಗೊತ್ತಾದ ದಿನದಲ್ಲಿ ಬರದೆಹೋದರೆ ರಿಸರ್ವೇಷನ್ ಅನ್ನು ರದ್ದು ಗೊಳಿಸಲಾಗುತ್ತದೆ. ಪಾವತಿ ಮ್ಠಾಡಿದ ಹಣವನ್ನು ಹಿಂದಿರುಗಿಸಲಾಗುವುದಾಗಲೀ, ಮುಂದಿನ ದಿನಗಳಿಗೆ ಹೊಂದಿಸುವುದಾಗಲೀ ನಡೆಯದು
* ಯಾತ್ರಿಕ ಸಂದಣಿ ಹೆಚ್ಚಾಗಿರುವಾಗ ಮುಂಗಡ ಕಾಯ್ದಿರಿಸುವಿಕೆ ಒಂದೇ ದಿನಕ್ಕೆ ಸೀಮಿತವಾಗುತ್ತದೆ.
* ವಸತಿ ಪಡೆದವರು ನಿಗದಿಯಾದ ಕಾಲಕ್ಕೆ ಕೋಣೆಗಳನ್ನು ಖಾಲಿಮಾಡದಿದ್ದಲ್ಲಿ ಸಾಮಾನ್ಯದ ಮೂರು ಪಟ್ಟು ಹಣವನ್ನು ದಂಡವನ್ನಾಗಿ ವಸೂಲಿ ಮಾಡಲಾಗುವುದು.
* ಈ ಮೇಲೆ ಹೇಳಿದ, ಶುಲ್ಕಗಳು ಕಾಲವ್ಯವಧಿ ಬದಲಾಗಬಹುದು

ಮುಂಗಡ ರಿಸರ್ವ್ ಮಾಡಿಸುವ ಸೌಲಭ್ಯ ತಿ.ತಿ.ದೇ ಸಮಾಚಾರ ಕೇಂದ್ರಗಳಿಂದಲೂ ಮಾಡಿಸಬಹುದು. ಇದಕ್ಕಾಗಿ ತಕ್ಕ ಶುಲ್ಕವನ್ನು ಮುವತ್ತು ದಿನಗಳ ಮೊದಲೇ ಭರ್ತಿಮಾಡಬೇಕು

ಆನಿವರ ಆಸ್ಥಾನ, ಸ್ವಾಮಿಯ ಪವಿತ್ರೋತ್ಸವ, ವಾರ್ಷಿಕ ಬ್ರಹ್ಮೋತ್ಸವ, ಪುಷ್ಪಯಾಗ, ಹೊಸವರ್ಷದ ಮೊದಲನೆಯ ದಿನಗಳಂದು ಮುಂಗಡ ರಿಸರ್ವ್ ಮಾಡಿಸುವುದನ್ನು ನಿಲ್ಲಿಸಲಾಗುವುದು. ಈ ಸಂದಣಿಯ ದಿನಗಳಲ್ಲಿ "ಮೊದಲು ತಿರುಮಲೆಗೆ ಬಂದವರಿಗೆ ಮೊದಲು" ಸೂತ್ರದನ್ವಯ ವಸತಿ ನೀಡಲಾಗುವುದು ಸುಸಜ್ಜಿತ ವಸತಿಯನ್ನು ಸೇವಾಶುಲ್ಕದೊಡನೆ ನೀಡಲಾಗುವುದು.

**ತಿ. ತಿ. ದೇ.**

# ವಾರ್ತಾಲಹರಿ

## ಅನ್ನಮಾಚಾರ್ಯ ವರ್ಧಂತಿ ಉತ್ಸವಗಳು

ಪದಕವಿತಾ ಪಿತಾಮಹರೆಂದು ಹೆಸರಾದ ತಾಳ್ಲಪಾಕ ಶ್ರೀ ಅನ್ನಮಾಚಾರ್ಯರ 496 ನೇ ವರ್ಧಂತಿ ಉತ್ಸವಗಳು ಮಾರ್ಚ್ 14 ರಿಂದ 20 ರ ವರೆಗೆ ವಾರಕಾಲ ತಿರುಪತಿಯಲ್ಲಿ ಉತ್ಸಾಹ ವೈಭವಗಳಿಂದ ನಡೆದು ಸಂಪನ್ನವಾದವು.

ಅನ್ನಮಾಚಾರ್ಯರ ವರ್ಧಂತಿಯ ಅಂಗವಾಗಿ ಉತ್ಸವದ ಆರಂಭ ತಿರುಮಲೆಯಲ್ಲಿ ಮಾರ್ಚ್ 14 ರಂದು ನಡೆಯಿತು ಶ್ರೀದೇವಿ ಭೂದೇವಿ ಸಹಿತವಾದ ಶ್ರೀ ಮಲೆಯಪ್ಪಸ್ವಾಮಿಯನ್ನು ಅನ್ನಮಾಚಾರ್ಯರ ವಿಗ್ರಹದೊಡನೆ ತಿರುಮಲೆಯ ತಿರುವೀಧಿಗಳಲ್ಲಿ ಮೆರವಣಿಗೆಯಲ್ಲಿ ಕರೆತಂದು ನಾರಾಯಣಗಿರಿಯ ಪುಷ್ಪೋದ್ಯಾನದಲ್ಲಿ ಏರ್ಪಡಿಸಲಾಗಿದ್ದ ಆಸ್ಥಾನದಲ್ಲಿ ಓಲೈಸಲಾಯಿತು ಅಹೋಬಿಲ ಮಠದ ಶ್ರೀ ಶ್ರೀ ಶಠಗೋಪನಾರಾಯಣ ಯತೀಂದ್ರ ಮಹಾದೇಶಿಕರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು ಮೊದಲಿಗೆ ಬೃಂದಗಾಯನದಲ್ಲಿ ಅನ್ನಮಾಚಾರ್ಯ ಕೀರ್ತನೆಯಾದ ಮೇಲೆ ಪೀಠಾಧಿಪತಿಗಳು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವು ಅವರನ್ನೂ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಅವರನ್ನೂ ಸನ್ಮಾನಿಸಿದರು ನಂತರ ತಾಳ್ಲಪಾಕ ವಂಶೀಯರನ್ನು ಕಾರ್ಯನಿರ್ವಹಣಾಧಿಕಾರಿಗಳು ಸಂಪ್ರದಾಯ ರೀತ್ಯಾ ಸತ್ಕರಿಸಿದರು ಅನ್ನಮಾಚಾರ್ಯರ ಸಂಗೀತ ಕೃತಿಗಳಿಂದ ಸ್ವಾಮಿ ಸೇವೆ ನಡೆಯಿತು

ಅದೇ ದಿನ ಬೆಳಗ್ಗೆ ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರಲ್ಲಿ ದಿನಮು ದ್ವಾದಶಿ ನೇಡು - ಎನ್ನುತ್ತ ಅನ್ನಮಾಚಾರ್ಯರನ್ನು ಆಹ್ವಾನಿಸುವ ಕೃತಿಯನ್ನು ಹಾಡಿದ ನಂತರ ಸಪ್ತಗಿರಿ ಸಂಕೀರ್ತನೆಗಳ ಗೋಷ್ಠಿಗಾನ ನಡೆಯಿತು ಈ ಸಂಗೀತ ಗೋಷ್ಠಿಯಲ್ಲಿ ಶ್ರೀಮತಿ ವೆಂಕಟ ಮಾನಲೋಚನಿ, ಚಿ|| ಶ್ರೀಹರ್ಷಚಕ್ರವರ್ತಿ, ಚಿ|| ಎಂ ಸತ್ಯವಾಣಿ, ಶ್ರೀಮತಿ ಲೀಲಾವತಿ, ಶ್ರೀಮತಿ ಕೆ ವಿಶಾಲಾಕ್ಷಿ, ಶ್ರೀ ಕೆ ಮುರಳೀಕೃಷ್ಣ ಪಾಲುಗೊಂಡಿದ್ದರು





ಮಾರ್ಚ್ 15 ರಂದು ಪದಕವಿತಾ ಸದಸ್ಸು ನಡೆಯಿತು ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿ ಪಾಲುಗೊಂಡ ಡಾ|| ಐ ವಿ ಸುಬ್ಬಾರಾವು ಅವರು ಮಾತನಾಡುತ್ತ ಅನ್ನಮಾಚಾರ್ಯರ ಕೃತಿಗಳು ಎಲ್ಲ ಕಡೆ ಹರಡುವಂತೆ ಮಾಡುವ ಯೋಜನೆಗಳನ್ನು ತಯಾರಿಸಬೇಕೆಂದೂ, ಕೀರ್ತನೆಗಳನ್ನು ಎಲ್ಲ ಭಾಷೆಗಳಿಗೂ ಅನುವಾದಿಸಿ ಪ್ರಚಾರ ಮಾಡಬೇಕೆಂದೂ ಕರೆ ನೀಡಿದರು ಈ ಸಭೆಗೆ ಎಸ್. ವಿ ವಿಶ್ವವಿದ್ಯಾಲಯದ ತೆಲುಗು ಪ್ರಾಚಾರ್ಯ ಡಾ|| ಕೆ ಸರ್ವೋತ್ತಮರಾವ್ ಅವರು ಅಧ್ಯಕ್ಷತೆ ವಹಿಸಿದ್ದರು. ಸರ್ವಶ್ರೀ ಉದಯಗಿರಿ ಶ್ರೀನಿವಾಸಾಚಾರ್ಯ, ವೈದ್ಯಂ ವೆಂಕಟೇಶ್ವರಾಚಾರ್ಯ, ಡಾ|| ರಮಣಯ್ಯ, ಡಾ|| ಎ ಪದ್ಮಬಾಲ ಮುಂತಾದವರು ಪ್ರಬಂಧಗಳನ್ನು ಪ್ರಸಿದ್ಧಗೊಳಿಸಿದರು ನಂತರ ನಡೆದ ಸಂಗೀತ ಸಭೆಗಳಲ್ಲಿ ಚಿ|| ಕೊಂಪೆಲ್ಲ ಕಲ್ಯಾಣ ರಾವು, ಕುಮಾರಿ ಬಿ. ಚೆನ್ನಮದೇವಿ, ಶ್ರೀಮತಿ ಎಸ್. ಎಸ್. ಎಸ್ ಜ್ಯೋತಿರ್ಮಯಿ, ಶ್ರೀಮತಿ ಎಂ ಸುಶೀಲ, ಶ್ರೀ ಜೆ ಮಧುಸೂದನರಾವು, ಶ್ರೀ ಎಂ ಎಸ್ ಬಾಲಸುಬ್ರಹ್ಮಣ್ಯ ಶರ್ಮ ಪಾಲುಗೊಂಡರು

ನಂತರದ ದಿನಗಳಲ್ಲಿ ನಡೆದ ವಿಶ್ವಗೋಷ್ಠಿಗಳಲ್ಲಿ ಸರ್ವಶ್ರೀ ಎಸ್ ಸಚ್ಚಿದಾನಂದಂ, ಡಾ|| ವಿ ಆನಂದಮೂರ್ತಿ, ಡಾ|| ಎಸ್ ಅಕ್ಕಿರೆಡ್ಡಿ, ಡಾ|| ಟಿ ನಿರ್ಮಲ, ಅಧ್ಯಕ್ಷರುಗಳಾಗಿ ಉತ್ತಮ ನುಡಿಕಾಣಿಕೆಯನ್ನು ಸಲ್ಲಿಸಿದರು

ಡಾ|| ಉಮ, ಡಾ|| ಮೆಹರ್ಮಣಿ, ಡಾ|| ಮಧು ಜ್ಯೋತಿ, ಡಾ|| ಪಿ ಲೀಲಾವತಿ, ಡಾ|| ರಾಜಗೋಪಾಲ ಚಕ್ರವರ್ತಿ, ಡಾ|| ಪಿ ವಿ ಸುಬ್ಬಾರಾವು ಡಾ|| ಸಿ ಗೋವಿಂದರಾಜು, ಡಾ|| ಸಿ ಜಯಪ್ರಕಾಶ್, ಡಾ|| ಬಿ ಕೆ. ದಳಾಯ, ಡಾ|| ಎಸ್ ಗಂಗಪ್ಪ, ಡಾ|| ಜಿ ಚಲಪತಿ, ಡಾ|| ಎ ಶಿವಾರೆಡ್ಡಿ, ಡಾ|| ದಾಮೋದರ ನಾಯುಡು, ಡಾ|| ವಿ ಸುಬ್ರಹ್ಮಣ್ಯಶಾಸ್ತ್ರಿ, ಡಾ|| ಎಸ್. ರಘುನಾಥ ಶರ್ಮ, ಶ್ರೀ ಎಸ್ ಗುರುಪ್ರಸಾದ ರಾವು ಮೊದಲಾದವರು ಪ್ರೌಢಪ್ರಬಂಧ ಮಂಡನೆ ಮಾಡಿದರು

ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರೇ ಅಲ್ಲದೆ ಪ್ರಮುಖ ಸಂಗೀತ ವಿದ್ವಾಂಸರೂ ಈ ವಾರ ಕಾಲದ ವರ್ಧಂತಿ ಉತ್ಸವಗಳಲ್ಲಿ ಅನ್ನಮಾಚಾರ್ಯ ಸಂಕೀರ್ತನೆಗಳನ್ನು ಹಾಡಿ ಜನವನ್ನು ಸಂಗೀತದ ಸುಧೆಯಲ್ಲಿ ಭಕ್ತಿ ಸಾಗರದಲ್ಲಿ ತೇಲಾಡುವಂತೆ, ತೊನೆದಾಡುವಂತೆ ಮಾಡಿದರು ಉತ್ಸವಗಳು ಮಾರ್ಚ್ 20 ರಂದು ಮುಗಿದವು.

## ಹೊಸ ಯೋಜನೆಗಳು

ಅನ್ನಮಾಚಾರ್ಯರ ಸಾಹಿತ್ಯವನ್ನು ಪರಿರಕ್ಷಿಸಿ, ಪರಿಶೋಧಿಸಿ, ಪ್ರಸಾರ ಮಾಡುವಲ್ಲಿ ನೂತನ ಯೋಜನೆಗಳನ್ನು ಸಿದ್ಧಗೊಳಿಸುತ್ತಿರುವುದಾಗಿ ತಿ ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವು ಅವರು ತಿಳಿಸಿದ್ದಾರೆ ಅನ್ನಮಾಚಾರ್ಯರ ಪದಪ್ರಯೋಗ ಸೂಚಿ, ಅನ್ನಮಾಚಾರ್ಯ ನಿಘಂಟು, ಅನ್ನಮಯ್ಯ ಸಾಹಿತ್ಯ ಕದಂಬಗಳನ್ನು ಪ್ರಕಟಿಸಬೇಕೆಂದು ತೀರ್ಮಾನಿಸಲಾಗಿದೆ ಎಂದು ಅವರು ತಿಳಿಸಿದರು

ತಿರುಪತಿಯ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯದವರು ನಿರ್ವಹಿಸಿದ ಪದಸಾಹಿತ್ಯ ವಸಂತೋತ್ಸವದಲ್ಲಿ ಮಾರ್ಚ್ 26 ರಂದು ಮುಖ್ಯ ಅತಿಥಿಯಾಗಿ ಭಾಗವಹಿಸಿದ ಅವರು ತಮ್ಮ ಪ್ರಾಸಂಗಿಕ ಭಾಷಣದಲ್ಲಿ ಅನ್ನಮಾಚಾರ್ಯರ ಸಾಹಿತ್ಯಕ್ಕೆ ಸಂಬಂಧಿಸಿದ ತಾಳಪತ್ರಗಳು, ತಾಮ್ರಪತ್ರಗಳು, ಮೊದಲಾದವನ್ನು ಮೈಕ್ರೋಫಿಲ್ಮ್ ಮಾಡುವುದರ ಮೂಲಕ ಮುಂದಿನ ತಲೆಮಾರುಗಳಿಗೆ ತಲುಪಿಸುವುದಾಗಿಯೂ ತಿಳಿಸಿದರು

ಈ ಕಾರ್ಯಕ್ರಮದಲ್ಲಿ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯದ ಉಪಕುಲಪತಿ ಪ್ರಾಚಾರ್ಯ ಕೊಲಕಲೂರಿ ಇನಾಕ್ ಅವರು ಅಧ್ಯಕ್ಷತೆ ವಹಿಸಿದ್ದರು ಡಾ|| ವಿ ಆನಂದ ಮೂರ್ತಿ ಪ್ರಾಸ್ತಾವಿಕ ಭಾಷಣ ಮಾಡಿದರು ಡಾ|| ಚಂದ್ರಶೇಖರರೆಡ್ಡಿ ಅವರು ಆಯೋಜಿಸಿದ ಸಭೆಯಲ್ಲಿ ಡಾ|| ಎಂ ಮೋಹನ್, ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು ಶೆಟ್ಟಿ ಮುಂತಾದವರು ಪಾಲುಗೊಂಡಿದ್ದರು

## ಸ್ವಾಮಿ ಆಲಯದಲ್ಲಿ ತಿರುಮಂಜನ

ತಿರುಮಲೆಯ ಸ್ವಾಮಿ ಆಲಯದಲ್ಲಿ ಮಾರ್ಚ್ 16 ರಂದು ಮಂಗಳವಾರ ಕೋಯಿಲ್ ಆಳ್ವಾರ್ ತಿರುಮಂಜನ ನಡೆಯಿತು ತತ್ಸಂದರ್ಭದಲ್ಲಿ ಬೆಳಗ್ಗೆ 8 ಗಂಟೆಯಿಂದ ಮಧ್ಯಾಹ್ನ 12 ಗಂಟೆಯವರೆಗೆ 4 ಗಂಟೆಗಳ ಕಾಲ ಶ್ರೀ ವೆಂಕಟೇಶ್ವರ ಸ್ವಾಮಿ ಆಲಯವನ್ನು ಶುದ್ಧಗೊಳಿಸಿದರು ಈ ಕೋಯಿಲ್ ಆಳ್ವಾರ್ ತಿರುಮಂಜನ ಕಾರ್ಯಕ್ರಮವನ್ನು ವರ್ಷಕ್ಕೆ ನಾಲ್ಕು ಬಾರಿ - ಯುಗಾದಿ, ಆನಿವರ ಆಸ್ಥಾನ, ಬ್ರಹ್ಮೋತ್ಸವ, ವೈಕುಂಠ ಏಕಾದಶಿಗಳ ಸಂದರ್ಭದಲ್ಲಿ - ಆಯಾ ಉತ್ಸವಗಳ ಮೊದಲ



## ನೇತ್ರ ಚಿಕಿತ್ಸಾಶಿಬಿರ

ತಿರುಪತಿಯ ಎರಡು, ಮೂರನೆ ಸತ್ರಗಳಲ್ಲಿ ಈಚೆಗೆ ತಿ ತಿ ದೇವಸ್ಥಾನಗಳ ವತಿಯಿಂದ ನಲವತ್ತನೆಯ ನೇತ್ರ ಚಿಕಿತ್ಸಾಶಿಬಿರ ನಡೆಯಿತು ಶಿಬಿರವನ್ನು ತಿ ತಿ ದೇ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ರಾಮಕೃಷ್ಣಯ್ಯ ಅವರು ಉದ್ಘಾಟಿಸಿದರು ಹೈದರಾಬಾದಿನ ಸರೋಜಿನೀ ನೇತ್ರ ಚಿಕಿತ್ಸಾ ಆಸ್ಪತ್ರೆಯವರ ಸಹಕಾರದಿಂದ ಏರ್ಪಾಡಾಗಿದ್ದ ಶಿಬಿರದಲ್ಲಿ ಮೊದಲೆರಡು ದಿನಗಳು ನೇತ್ರ ರೋಗ ತಪಾಸಣೆ ನಡೆದು ನಂತರ ಶಸ್ತ್ರ ಚಿಕಿತ್ಸೆಗಳು ನಡೆದು ಯಶಸ್ವಿಯಾದವು. ತಿ ತಿ ದೇ ಗಳ ವತಿಯಿಂದ ವಸತಿ ಹಾಗೂ ಭೋಜನ ಸೌಕರ್ಯವನ್ನು ಒದಗಿಸಲಾಗಿದ್ದಿತು. ಶಸ್ತ್ರಚಿಕಿತ್ಸಾನಂತರ ಸುಲೋಚನಗಳನ್ನು ವಿತರಿಸಲಾಯಿತು



ಮಂಗಳವಾರಗಳಂದು ನಿರ್ವಹಿಸುವ ಪರಿಪಾಠಿ ಯಿದ್ದು ಹರಿದ್ರಾಕುಂಕುಮ, ಕಸ್ತೂರಿಗೋರೋಜನ ಮೊದಲಾದ ಮಂಗಳ ಸುಗಂಧ ದ್ರವ್ಯಗಳಿಂದ ಆಲ ಯವನ್ನು ತೊಳೆಯಲಾಗುತ್ತದೆ

ಈ ಕಾರ್ಯಕ್ರಮದಲ್ಲಿ ತಿ ತಿ ದೇ ಕಾರ್ಯನಿರ್ವ ಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವ್ಪ, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಬಾಲಸು ಬ್ರಹ್ಮಣ್ಯಂ, ಶ್ರೀ ರಾಮಕೃಷ್ಣಯ್ಯ, ಚೀಫ್ ಇಂಜನೀ ಯರ್ ಶ್ರೀ ಮುನಿರೆಡ್ಡಿ ಮತ್ತಿತರರು ಭಾಗವಹಿಸಿ ದ್ದರು

## ಯುಗಾದಿ ಆಸ್ಥಾನ

ಕೋಯಿಲ್ ಆಳ್ವಾರ್ ತಿರುಮಂಜನ ಮಾರ್ಚ್ 16 ರಂದು ಮಂಗಳವಾರ ನಡೆದರೆ ಮಾರ್ಚ್ 18 ರಂದು ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ಯುಗಾದಿ ಆಸ್ಥಾನ ವೈಬವದಿಂದ ಸಂಪನ್ನವಾಯಿತು ಉಭಯ ನಾಯಕಿಯರೊಡನೆ ಶ್ರೀ ಮಲೆಯಪ್ಪ ಸ್ವಾಮಿಯನ್ನು ಶೋಭಾಯಮಾ ನವಾದ ವಜ್ರಾಭರಣಗಳಿಂದ ಅಲಂಕರಿಸಿ ಸರ್ವ ಬೂಪಾಲ ವಾಹನದಲ್ಲಿ ಆಸೀನಗೊಳಿಸಿ ಮೆರವ ಣಿಗೆ ಮಾಡಲಾಯಿತು ಆಲಯದ ತಿರುಮಾ ಮಣಿ ಮಂಟಪದಲ್ಲಿ ಸ್ವಾಮಿಯ ಓಲಗ ನಡೆಯಿತು ಆಸ್ಥಾನ ಪಂಡಿತರು ಪಂಚಾಂಗವನ್ನು ಪಠಿಸಿದರು ನೂತನ ವರ್ಷದ ಸ್ಥಿತಿಗತಿಗಳ ಫಲಾಫಲಗಳನ್ನು ವಿವರಿಸಿದರು ಈ ಉತ್ಸವಗಳಲ್ಲಿ ಡಾ|| ಐ ವಿ ಸುಬ್ಬಾರಾವ್ಪ, ಸಂಯುಕ್ತ ಕಾರ್ಯನಿರ್ವಹಣಾಧಿಕಾ ರಿಗಳಾದ ಶ್ರೀ ರಾಮಕೃಷ್ಣಯ್ಯ, ಶ್ರೀ ಬಾಲಸುಬ್ರ ಹ್ಮಣ್ಯಂ, ತಿ ತಿ ದೇ ಧರ್ಮಕರ್ತರ ಮಂಡಳಿಯ ಸದ ಸ್ಯರಾದ ಶ್ರೀ ಮಹದೇವನಾಯುಡು, ಪೌರಸಂಬಂ ದಾದಿಕಾರಿ ಶ್ರೀ ಸುಭಾಷ್ ಗೌಡ್ - ಮೊದಲಾದ ವರು ಭಾಗವಹಿಸಿದ್ದರು

## ಸ್ವಾಮಿಗೆ ಶ್ರೀವತ್ಸದ ಕಾಣಿಕೆ

ಶ್ರೀಲಂಕಾ ದೇಶದ ಶ್ರೀ ಗೋಪಾಲಸ್ವಾಮಿ ಎಂಬ ಬಕ್ತರು ತಿರುಮಲೆ ಶ್ರೀ ವೆಂಕಟೇಶ್ವರಸ್ವಾಮಿಗೆ ಐವತ್ತು ಲಕ್ಷ ರೂಪಾಯಿಗಳ ಬೆಲೆಬಾಳುವ ಶ್ರೀವತ್ಸ ಆಭರಣವನ್ನು ಕಾಣಿಕೆಯಾಗಿ ನೀಡಿದ್ದಾರೆ ಸ್ವಾಮಿ ಆಲಯದಲ್ಲಿ ಮಾರ್ಚ್ 18 ರಂದು ಗುರುವಾರ ರಾತ್ರಿ ನಡೆದ ಕಾರ್ಯಕ್ರಮದಲ್ಲಿ ಆತ ತಮ್ಮ ತಂಡೆ ಯವರ ಹೆಸರಿನಲ್ಲಿ ಈ ಆಭರಣವನ್ನು ಸ್ವಾಮಿಗೆ ನೀಡಿದರು ಸ್ವಾಮಿಯ ಪರವಾಗಿ ಕಾರ್ಯನಿ ರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವ್ಪ ಅವರು ಸ್ವೀಕರಿಸಿದರು



## ತಿರುಮಲೆಯಲ್ಲಿ ಮಹಾರಾಷ್ಟ್ರ ಮುಖ್ಯಮಂತ್ರಿ

ಮಹಾರಾಷ್ಟ್ರದ ಮುಖ್ಯಮಂತ್ರಿ ಶ್ರೀ ನಾರಾಯಣ ರಾಣೆ ಅವರು ಕುಟುಂ ಬಸಹಿತರಾಗಿ ತಿರುಮಲೆಗಾಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾದಿಸಿದರು ಕಾರ್ಯನಿರ್ವಹಣಾದಿಕಾರಿ ಡಾ|| ಐ ವಿ ಸುಬ್ಬಾರಾವ್ ಅವರು ಮುಖ್ಯಮಂತ್ರಿ ಗಳನ್ನು ಸ್ವಾಗತಿಸಿ ಅವರಿಗೆ ತಿ ತಿ ದೇ ಗಳ ಪರಿಚಯಮಾಡಿಕೊಟ್ಟರು ಸ್ವಾಮಿ ದರ್ಶನಾನಂತರ ವೇದಾಶೀರ್ವಚನ ನೀಡಲಾಯಿತು ಸ್ವಾಮಿಯ ಪ್ರಸಾದವನ್ನು ಅವರಿಗೆ ನೀಡಲಾಯಿತು



## ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವ

ತಿರುಪತಿಯ ಶ್ರೀ ಕೋದಂಡರಾಮಸ್ವಾಮಿ ವಾರ್ಷಿಕ ಬ್ರಹ್ಮೋತ್ಸವ ಮಾರ್ಚ್ 16 ರಿಂದ 24 ರ ವರೆಗೆ ಒಂಭತ್ತು ದಿನಗಳ ಕಾಲ ಯಶಸ್ವಿಯಾಗಿ ನಡೆದು ಮುಕ್ತಾಯವಾಯಿತು ಮಾರ್ಚ್ 15 ರಂದು ಅಂಕುರಾರ್ಪಣೆ ನಡೆಯಿತು ಮಾರ್ಚ್ 16 ರಂದು ಧ್ವಜಾರೋಹಣದಿಂದ ಈ ಬ್ರಹ್ಮೋತ್ಸವಗಳು ಅಂಗರಂಗ ವೈಭವದಿಂದ ಆರಂಭವಾದವು.

ಈ ಉತ್ಸವಗಳ ಭಾಗವಾಗಿ ಶ್ರೀ ಕೋದಂಡರಾಮಸ್ವಾಮಿಯು ಪತ್ನೀ, ಸೋದರ, ಹನುಮತ್ಸಮೇತರಾಗಿ ದೊಡ್ಡ ಶೇಷವಾಹನ, ಚಿಕ್ಕ ಶೇಷವಾಹನ, ಹಂಸವಾಹನ, ಸಿಂಹವಾಹನ ಮುತ್ತಿನ ಚಪ್ಪರವಾಹನ, ಕಲ್ಪವೃಕ್ಷವಾಹನ, ಗಜವಾಹನ ಗರುಡವಾಹನ ಹನುಮಂತ, ಸೂರ್ಯಪ್ರಭ, ಚಂದ್ರಪ್ರಭ, ವಾಹನಗಳಲ್ಲಿ ರಥ ಬೀದಿಗಳಲ್ಲಿ ಮೆರವಣಿಗೆಯಲ್ಲಿ ಹೊರಟು ಭಕ್ತಜನರನ್ನು ಮುದಗೊಳಿಸಿದರು

ಮಾರ್ಚ್ 23 ರಂದು ಮಂಗಳವಾರ ಶ್ರೀ ರಾಮಚಂದ್ರಸ್ವಾಮಿಯ ರಥೋತ್ಸವ ಅತ್ಯಂತ ವೈಭವದಿಂದ ನಡೆಯಿತು ಸಾವಿರಾರು ಮಂದಿ ಭಕ್ತರು ಸಂತಸದಿಂದಲೂ, ಭಕ್ತಿಯಿಂದಲೂ, ರಥವನ್ನೇರಿದ ರಾಮಚಂದ್ರನನ್ನು ದರ್ಶಿಸಿ ಆನಂದಿಸಿದರು

ಮಾರ್ಚ್ 24 ರಂದು ಬುಧವಾರದಂದು ಚಕ್ರಸ್ನಾನದಿಂದ ಬ್ರಹ್ಮೋತ್ಸವಗಳು ಮುಗಿತಾಯ ಹೊಂದಿದವು.

## ಸೀತಾರಾಮ ಕಲ್ಯಾಣ

ತಿರುಪತಿಯ ಶ್ರೀ ಕೋದಂಡರಾಮಸ್ವಾಮಿ ದೇವಾಲಯದಲ್ಲಿ ಮಾರ್ಚ್ 26 ರಂದು ಶುಕ್ರವಾರ ರಾತ್ರಿ ಶ್ರೀ ರಾಮಚಂದ್ರ ಸೀತಾದೇವಿಯವರ ವಿವಾಹವು ಅತ್ಯಂತ ವೈಭವದಿಂದ ನಡೆಯಿತು. ಈ ವಿವಾಹಕ್ಕೆ ತಿ ತಿ ದೇ ಪರಿಪಾಲನಾ ಭವನದಿಂದ ಮೆರವಣಿಗೆಯಲ್ಲಿ ಮುತ್ತಿನ ಅಕ್ಷತೆಯನ್ನು ತೆಗೆದುಕೊಂಡು ಬರಲಾಯಿತು ಆಲಯದ ವರೆಗಿನ ಈ ಮೆರವಣಿಗೆಯಲ್ಲಿ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾ







ರಾವು ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ರಾಮಕೃಷ್ಣಯ್ಯ ಮತ್ತಿತರ ದೇವಾಲಯ ಅಧಿಕಾರಿಗಳು ಭಾಗವಹಿಸಿದ್ದರು ಸಾವಿರಾರು ಮಂದಿ ಭಕ್ತರು ಸ್ವಾಮಿಯ ಕಲ್ಯಾಣವನ್ನು ಪ್ರತ್ಯಕ್ಷವಾಗಿ ನೋಡಿ ದಣಿದ ಮೇಲೆ ನಾಲ್ಕು ರಥ ಬೀದಿಗಳಲ್ಲಿ ಮೆರವಣಿಗೆಯಲ್ಲಿ ಸ್ವಾಮಿಯನ್ನು ಅಮ್ಮನವರನ್ನೂ ಕರೆದೊಯ್ಯಲಾಯಿತು.



## ಧರ್ಮಕರ್ತರ ಮಂಡಳಿಯ ನಿರ್ಣಯಗಳು

ತಿರುಮಲ ತಿರುಪತಿ ದೇವಸ್ಥಾನಗಳ ಧರ್ಮಕರ್ತರ ಮಂಡಳಿಯು ಮಾರ್ಚ್ ತಿಂಗಳಲ್ಲಿ ಸೇರಿದ್ದು ಅಲ್ಲಿ ತೀರ್ಮಾನಿಸಲಾದ ಹಲವು ತೀರ್ಮಾನಗಳ ವಿವರಗಳನ್ನು ಮಾರ್ಚ್ 21 ರಂದು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ. ವಿ ಸುಬ್ಬಾರಾವು ಅವರು ಪತ್ರಕರ್ತರ ಸಮಾವೇಶದಲ್ಲಿ ತಿಳಿಸಿದರು

* ಪ್ರಯೋಗಾತ್ಮಕವಾಗಿ ಪ್ರವೇಶಗೊಳಿಸಿದ ಸುದರ್ಶನ (ಟೋಕನ್) ವಿಧಾನವನ್ನು ಅತಿ ಶೀಘ್ರದಲ್ಲಿ ಭಕ್ತರೆಲ್ಲರಿಗೂ ಅನ್ವಯಿಸುವಂತೆ ಜಾರಿಗೊಳಿಸಬೇಕೆಂದು ತೀರ್ಮಾನಿಸಲಾಗಿದೆ

* ಸುದರ್ಶನ (ಟೋಕನ್) ಚೀಟಿ (ಕಂಕಣ ಪತ್ರ) ಗಳನ್ನು ನೀಡಲು ತಿರುಮಲೆ, ತಿರುಪತಿಗಳಲ್ಲಿ ಐವತ್ತು ಕೇಂದ್ರಗಳನ್ನು ತೆರೆಯಬೇಕೆಂದು ತೀರ್ಮಾನಿಸಲಾಯಿತು

* ಶ್ರೀವೆಂಕಟೇಶ್ವರಸ್ವಾಮಿಯನ್ನು ದರ್ಶಿಸಲು ಬರುವ ಯಾತ್ರಿಕರಿಗಾಗಿ ತಿರುಪತಿಯಲ್ಲಿ ಒಂದು ಕಿರಿಯ ಉಪನಗರವನ್ನು ನಿರ್ಮಿಸಬೇಕು ಎಂದು ತೀರ್ಮಾನಿಸಲಾಯಿತು

* ತಿರುಮಲೆಯ ಒಂದನೇ ಉಚಿತ ಸತ್ರದ ನೂರು ಕೋಣೆಗಳನ್ನು ಜೀರ್ಣೋದ್ಧಾರ ಮಾಡಿಸಲು 1.2 ಕೋಟಿ ರೂಪಾಯಿಗಳ ವೆಚ್ಚ ಮಾಡಲು ತೀರ್ಮಾನಿಸಲಾಯಿತು

* ಹೈದರಾಬಾದಿನ ಕೀಸರಗುಟ್ಟದಲ್ಲಿ ಪಾಠಶಾಲಾಭವನದ ಮೊದಲ ಅಂತಸ್ತಿನ ನೂತನ ನಿರ್ಮಾಣಕ್ಕೆ 12 ಲಕ್ಷ ರೂಪಾಯಿಗಳನ್ನೂ, ವಿವೇಕವರ್ಧಿನಿ ಸಂಸ್ಕೃತ ಪಾಠಶಾಲೆಯ ವಸತಿಗೃಹ ನಿರ್ಮಾಣಕ್ಕೆ 40 ಲಕ್ಷ ರೂಪಾಯಿಗಳು, ತಿರುಪತಿಯ ಸ್ವಿಮ್ಸ್ ಆಸ್ಪತ್ರೆಯ ಮೊದಲ ಅಂತಸ್ತಿನ ನಿರ್ಮಾಣದಲ್ಲಿ ರೂ 50 ಲಕ್ಷ, ನಾರಾಯಣ ವನದ ವೀರಭದ್ರಸ್ವಾಮಿ ಆಲಯ ಅಮ್ಮನವರ ಆಲಯಗಳ ಧ್ವಜಸ್ತಂಭಗಳಿಗಾಗಿ ಎರಡು ಲಕ್ಷ ರೂಪಾಯಿಗಳ ವೆಚ್ಚವನ್ನು ಭರಿಸಲು ತೀರ್ಮಾನಿಸಲಾಗಿದೆ

* ಎಂಡೋಮೆಂಟ್ ಯೋಜನೆಯಡಿಯಲ್ಲಿ ಐದು ಲಕ್ಷ ರೂಪಾಯಿಗಳಿಗಿಂತ ಹೆಚ್ಚಿಗೆ ದಾನನೀಡುವ ದಾತರಿಗೆ ವರ್ಷಕ್ಕೆ ಒಮ್ಮೆ ಕಲ್ಯಾಣೋತ್ಸವದ ಶಾಲು, ಹತ್ತು ಲಾಡು, ಅವರಿಗೆ ಅನುಕೂಲವಾದಾಗ ಮೂರು ದಿನಗಳ ಕಾಲ ವಿ ಐ.ಪಿ ದರ್ಶನಗಳ ಏರ್ಪಾಡು ಮಾಡಬೇಕೆಂದು ತೀರ್ಮಾನಿಸಲಾಗಿದೆ

ಈ ಪತ್ರಕರ್ತರ ಸಮಾವೇಶದಲ್ಲಿ ಕಾರ್ಯನಿರ್ವಹಣಾಧಿಕಾರಿಗಳೊಡನೆ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಗಳು ಶ್ರೀ ಬಾಲಸುಬ್ರಹ್ಮಣ್ಯಂ, ಶ್ರೀ ರಾಮಕೃಷ್ಣಯ್ಯ, ಆರ್ಥಿಕ ಸಲಹಾದಾರ ಶ್ರೀ ಬಾಲಸುಬ್ರಹ್ಮಣ್ಯಂ, ಪೌರಸಂಬಂಧಾಧಿಕಾರಿ ಶ್ರೀ ಸುಭಾಷ್‌ಗೌಡ್ - ಮೊದಲಾದವರು ಭಾಗವಹಿಸಿದ್ದರು

## ಸ್ವಾಮಿಗೆ ಲಕ್ಷ್ಮೀಹಾರ

ಚೆನ್ನೈಗೆ ಸಂದ ಒಬ್ಬ ಭಕ್ತರು ಸ್ವಾಮಿಗ 1700 ಗ್ರಾಮುಗಳ ಬಂಗಾರದಿಂದ ಮಾಡಿದ ಲಕ್ಷ್ಮೀ ಹಾರವನ್ನು ಕಾಣಿಕೆಯಾಗಿ ಸಮರ್ಪಿಸಿದ್ದಾರೆ

## ಕೃತಿ ಸೌರಭ ಬಿಡುಗಡೆ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಶ್ರೀ ರಂಗನಾಯಕ ಮಂಟಪದಲ್ಲಿ ಮಾರ್ಚ್ 18 ರಂದು ಯುಗಾದಿಯ ಸಂದರ್ಭದಲ್ಲಿ ಕೃತಿಸೌರಭ ಆಡಿಯೋ ಕ್ಯಾಸೆಟ್ ಬಿಡುಗಡೆ ನಡೆಯಿತು ಶ್ರೀ ವೆಂಕಟೇಶ್ವರ ರಿಕಾರ್ಡಿಂಗ್ ಪ್ರಾಜೆಕ್ಟ್ ರೂಪಗೊಳಿಸಿದ ಈ ಧ್ವನಿಸುರುಳಿಯನ್ನು ಡಾ|| ಐ ವಿ ಸುಬ್ಬಾರಾವು ಬಿಡುಗಡೆ ಮಾಡಿದರು ಮೊದಲ ಧ್ವನಿಸುರುಳಿಯನ್ನು ಮಾಜಿಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಅವರಿಗೆ ಬಹೂಕರಿಸಲಾಯಿತು ತ್ಯಾಗರಾಜಸ್ವಾಮಿ, ಮುತ್ತುಸ್ವಾಮಿ ದೀಕ್ಷಿತರ್, ಮುಂತಾದ ಒಂಭತ್ತು ಮಂದಿ ವಾಗ್ಗೇಯಕಾರರ ಕೀರ್ತನೆಗಳು ಈ ಧ್ವನಿಸುರುಳಿಯಲ್ಲಿವೆಯೆಂದು ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು ಶೆಟ್ಟಿ ಅವರು ತಿಳಿಸಿದ್ದಾರೆ

ಈ ಕಾರ್ಯಕ್ರಮದಲ್ಲಿ ಜೆ ಇ ಓ ಶ್ರೀ ಬಾಲಸುಬ್ರಹ್ಮಣ್ಯಂ ಆರ್ಥಿಕ ಸಲಹಾದಾರ ಶ್ರೀ ಬಾಲಸುಬ್ರಹ್ಮಣ್ಯಂ, ಪೌರಸಂಬಂಧಾಧಿಕಾರಿ ಶ್ರೀ ಸುಭಾಷ್‌ಗೌಡ್, ಧರ್ಮಕರ್ತರ ಮಂಡಳಿಯ ಸದಸ್ಯ ಶ್ರೀ ಮಹದೇವನಾಯುಡು, ಮೊದಲಾದವರು ಪಾಲ್ಗೊಂಡಿದ್ದರು



Edited and Published on behalf of TT Devasthanams by Dr N S Rama Murthy, and Printed at TTD Press by M Lakshmana Rao, B A L P T, Manager, TTD Press Tirupati 517 507

### ತಿರುಮಲ - ತಿರುಪತಿ ದೇವಸ್ಥಾನಗಳು, ತಿರುಪತಿ.



# ಬರ್ಡ್

**ಸಾರ್ಥಕ ಸೇವೆಯ ಆದರ್ಶ :**

ಅಂಗವಿಕಲರ ಪುನರಾವಾಸ, ಪರಿಶೋಧನೆ, ಶಸ್ತ್ರಚಿಕಿತ್ಸೆಗಳ ಬಾಲಾಜಿ ಆಸ್ಪತ್ರೆಯು (ಬಾಲಾಜಿ ಇನ್‌ಸ್ಟಿಟ್ಯೂಟ್ ಆಫ್ ಸರ್ಜರಿ ರಿಸರ್ಚ್ ಅಂಡ್ ರಿಹ್ಯಾಬಿಲಿಟೇಷನ್ ಫಾರ್ ದಿ ಡಿಸೇಬಲ್ಡ್) ಮಾನವ ಸೇವೆಯ ಮೂಲಕ ಮಾಧವ ಸೇವೆಯನ್ನು ನಡೆಸುವ ತಿ ತಿ ದೇವಸ್ಥಾನಗಳ ಆದರ್ಶ ವಂತಿಕೆಗೆ ಸಾಕ್ಷಿಯಾಗಿ ಅಂಗವಿಕಲರ ಸೇವೆಯಲ್ಲಿ ನಿರತವಾಗಿದೆ

1985 ರಲ್ಲಿ ಸ್ಥಾಪನೆಯಾದ ಬರ್ಡ್ ಸಂಸ್ಥೆ ಅಂಗ ರಚನಾ ಶಾಸ್ತ್ರ ಕ್ಷೇತ್ರದಲ್ಲಿ ಹಲವು ರೀತಿಯ ಹೊಸ ಹಾದಿಗಳನ್ನುಂಟುಮಾಡಿದೆ ಪೋಲಿಯೊ ಪೀಡಿತರು, ಜನ್ಮಾರಭ್ಯ ನ್ಯೂನತೆಗಳು, ಮಿದುಳ ಪಕ್ಷವಾತಗಳ ಮೂಲಕ ವಿಕಲಾಂಗರಾದ ರೋಗಿಗಳಿಗೆ ಉತ್ತಮವಾದ ಚಿಕಿತ್ಸೆಯನ್ನು ನೀಡುವ ಈ ಆಸ್ಪತ್ರೆ ಬಡ ಜನತೆಯ, ಅಗತ್ಯವಿದ್ದವರ ಸೇವೆಯಲ್ಲಿ ಸಮರ್ಪಿತವಾಗಿದೆ

## ಬರ್ಡ್‌ನ ಕೆಲವು ಸಾಧನೆಗಳು, ಅಗತ್ಯಗಳು, ಅನುಕೂಲಗಳು.

* ಬೆನ್ನು ಹುರಿಯ ಘಾಯದ ಚಿಕಿತ್ಸೆಯಲ್ಲಿ ಸದಾಸಿದ್ಧ ಯಂತ್ರೋಪಕರಣಗಳ ಬಳಕೆ
* ಎರಡು ಲಕ್ಷಕ್ಕೂ ಹೆಚ್ಚು ಮಂದಿಯ ಸಫಲ ಚಿಕಿತ್ಸೆಯಾಗಿದೆ
* 300 ಒಳರೋಗಿಗಳ ಹಾಸಿಗೆಗಳ ಚಿಕಿತ್ಸೆಗೆ ಅವಕಾಶವಿರುವ ಕೇಂದ್ರೀಕೃತ ಹವಾನಿಯಂತ್ರಿತ ಆಸ್ಪತ್ರೆ, ನಾಲ್ಕು ಶಸ್ತ್ರ ಚಿಕಿತ್ಸಾ ಕೋಣೆಗಳು
* ಕೃತಕ ಅಂಗಾಂಗಳ, ಆಧಾರಗಳ, ಆಲಂಬನಗಳ ಉಚಿತ ವಿತರಣೆ
* ಬರ್ಡ್‌ಗಾಗಿ ನೀಡುವ ಎಲ್ಲ ದಾನಗಳೂ ಆದಾಯಕರ ನಿಯಮದ 80 (ಜಿ) ಕಲವಿನ ಪ್ರಕಾರ ಆದಾಯ ಕರಮುಕ್ತವಾಗಿರುವುವು.
* ಐದು ಲಕ್ಷ ರೂಪಾಯಿ ಹಾಗೂ ಹೆಚ್ಚಿಗೆ ದಾನ ನೀಡಿದವರ ಹೆಸರಿನೊಡನೆ ಇರುವ ಭಾವಚಿತ್ರವನ್ನು ಬರ್ಡ್ ಆಸ್ಪತ್ರೆಯಲ್ಲಿ ಪ್ರದರ್ಶಿಸಲಾಗುವುದು
* ವರ್ಷಕ್ಕೆ ಒಮ್ಮೆ ಮೂರುದಿನ ದಾನಿಗಳ ಐದುಮಂದಿಗೆ ತಿರುಮಲೆಯಲ್ಲಿ ಉಚಿತದರ್ಶನ, ಸ್ವಾಮಿಯ ಆರತಿ ನೀಡಲಾಗುವುದು
* ಹತ್ತು ಲಕ್ಷ ರೂಗಳು ಹಾಗೂ ಹೆಚ್ಚಿನ ದಾನ ನೀಡುವವರ ಹೆಸರನ್ನು ಒಂದು ಕೋಣೆಗೆ ಇಡಲಾಗುವುದು
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಬೆಳ್ಳಿಯ ಚಿತ್ರದ ಜ್ಞಾಪಿಕೆಯನ್ನು ಐದು ಲಕ್ಷ, ಹತ್ತು ಲಕ್ಷ ರೂಪಾಯಿಗಳ ದಾನಿಗಳಿಗೆ ನೀಡಲಾಗುವುದು

ದಾನಿಗಳು ಉದಾರವಾಗಿ ನೀಡುವ ದಾನಗಳನ್ನು ಬರ್ಡ್‌ನ ವಿವಿಧ ಯೋಜನೆಗಳಲ್ಲಿ ತೊಡಗಿಸಲಾಗುವುದು ಕೃತಕ ಅಂಗಾಂಗಗಳ ಉತ್ಪಾದನೆ ವಿತರಣೆಗೆ, ರೋಗಿಗಳ ಉಚಿತ ಭೋಜನ ರಿಯಾಯಿತಿ ದರಗಳ ಪ್ರಯಾಣ ವೆಚ್ಚಗಳಿಗೆ ಬಳಸಲಾಗುವುದು ದಾನಗಳನ್ನು ಕಾರ್ಯನಿರ್ವಹಣಾಧಿಕಾರಿ, ಬರ್ಡ್ ಟ್ರಸ್ಟ್, ತಿ ತಿ ದೇವಸ್ಥಾನಗಳು, ತಿರುಪತಿ - ಇವರ ಹೆಸರಿಗೆ ಕಳುಹಿಸಬಹುದು



ಕಾರ್ಯನಿರ್ವಹಣಾಧಿಕಾರಿ,

ತಿ ತಿ ದೇವಸ್ಥಾನಗಳು, ತಿರುಪತಿ - 517 501

## ತಿರುಮಲ - ತಿರುಪತಿ ದೇವಸ್ಥಾನಗಳು, ತಿರುಪತಿ.



# ಬರ್ಡ್

### ಸಾರ್ಥಕ ಸೇವೆಯ ಆದರ್ಶ :

ಅಂಗವಿಕಲರ ಪುನರಾವಾಸ, ಪರಿಶೋಧನೆ, ಶಸ್ತ್ರಚಿಕಿತ್ಸೆಗಳ ಬಾಲಾಜಿ ಆಸ್ಪತ್ರೆಯು (ಬಾಲಾಜಿ ಇನ್ಸ್ಟಿಟ್ಯೂಟ್ ಆಫ್ ಸರ್ಜರಿ ರಿಸರ್ಚ್ ಅಂಡ್ ರಿಹ್ಯಾಬಿಲಿಟೇಷನ್ ಫಾರ್ ದಿ ಡಿಸೇಬಲ್ಡ್) ಮಾನವ ಸೇವೆಯ ಮೂಲಕ ಮಾಧವ ಸೇವೆಯನ್ನು ನಡೆಸುವ ತಿ ತಿ ದೇವಸ್ಥಾನಗಳ ಆದರ್ಶ ವಂತಿಕೆಗೆ ಸಾಕ್ಷಿಯಾಗಿ ಅಂಗವಿಕಲರ ಸೇವೆಯಲ್ಲಿ ನಿರತವಾಗಿದೆ

1985 ರಲ್ಲಿ ಸ್ಥಾಪನೆಯಾದ ಬರ್ಡ್ ಸಂಸ್ಥೆ ಅಂಗ ರಚನಾ ಶಾಸ್ತ್ರ ಕ್ಷೇತ್ರದಲ್ಲಿ ಹಲವು ರೀತಿಯ ಹೊಸ ಹಾದಿಗಳನ್ನುಂಟುಮಾಡಿದೆ ಪೋಲಿಯೊ ಪೀಡಿತರು, ಜನ್ಮಾರಭ್ಯ ನ್ಯೂನತೆಗಳು, ಮಿದುಳ ಪಕ್ಷವಾತಗಳ ಮೂಲಕ ವಿಕಲಾಂಗರಾದ ರೋಗಿಗಳಿಗೆ ಉತ್ತಮವಾದ ಚಿಕಿತ್ಸೆಯನ್ನು ನೀಡುವ ಈ ಆಸ್ಪತ್ರೆ ಬಡ ಜನತೆಯ, ಅಗತ್ಯವಿದ್ದವರ ಸೇವೆಯಲ್ಲಿ ಸಮರ್ಪಿತವಾಗಿದೆ

### ಬರ್ಡ್‌ನ ಕೆಲವು ಸಾಧನೆಗಳು, ಅಗತ್ಯಗಳು, ಅನುಕೂಲಗಳು.

* ದೆನ್ನು ಹುರಿಯ ಘಾಯದ ಚಿಕಿತ್ಸೆಯಲ್ಲಿ ಸದಾಸಿದ್ಧ ಯಂತ್ರೋಪಕರಣಗಳ ಬಳಕೆ
* ಎರಡು ಲಕ್ಷಕ್ಕೂ ಹೆಚ್ಚು ಮಂದಿಯ ಸಫಲ ಚಿಕಿತ್ಸೆಯಾಗಿದೆ
* 300 ಒಳರೋಗಿಗಳ ಹಾಸಿಗೆಗಳ ಚಿಕಿತ್ಸೆಗೆ ಅವಕಾಶವಿರುವ ಕೇಂದ್ರೀಕೃತ ಹವಾನಿಯಂತ್ರಿತ ಆಸ್ಪತ್ರೆ, ನಾಲ್ಕು ಶಸ್ತ್ರ ಚಿಕಿತ್ಸಾ ಕೋಣೆಗಳು
* ಕೃತಕ ಅಂಗಾಂಗಳ, ಆಧಾರಗಳ, ಆಲಂಬನಗಳ ಉಚಿತ ವಿತರಣೆ
* ಬರ್ಡ್‌ಗಾಗಿ ನೀಡುವ ಎಲ್ಲ ದಾನಗಳೂ ಆದಾಯಕರ ನಿಯಮದ 80 (ಜಿ) ಕಲವಿನ ಪ್ರಕಾರ ಆದಾಯ ಕರಮುಕ್ತವಾಗಿರುವುವು.
* ಐದು ಲಕ್ಷ ರೂಪಾಯಿ ಹಾಗೂ ಹೆಚ್ಚಿಗೆ ದಾನ ನೀಡಿದವರ ಹೆಸರಿನೊಡನೆ ಇರುವ ಭಾವಚಿತ್ರವನ್ನು ಬರ್ಡ್ ಆಸ್ಪತ್ರೆಯಲ್ಲಿ ಪ್ರದರ್ಶಿಸಲಾಗುವುದು
* ವರ್ಷಕ್ಕೆ ಒಮ್ಮೆ ಮೂರುದಿನ ದಾನಿಗಳ ಐದುಮಂದಿಗೆ ತಿರುಮಲೆಯಲ್ಲಿ ಉಚಿತದರ್ಶನ, ಸ್ವಾಮಿಯ ಆರತಿ ನೀಡಲಾಗುವುದು
* ಹತ್ತು ಲಕ್ಷ ರೂಗಳು ಹಾಗೂ ಹೆಚ್ಚಿನ ದಾನ ನೀಡುವವರ ಹೆಸರನ್ನು ಒಂದು ಕೋಣೆಗೆ ಇಡಲಾಗುವುದು
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಬೆಳ್ಳಿಯ ಚಿತ್ರದ ಜ್ಞಾಪಿಕೆಯನ್ನು ಐದು ಲಕ್ಷ, ಹತ್ತು ಲಕ್ಷ ರೂಪಾಯಿಗಳ ದಾನಿಗಳಿಗೆ ನೀಡಲಾಗುವುದು

ದಾನಿಗಳು ಉದಾರವಾಗಿ ನೀಡುವ ದಾನಗಳನ್ನು ಬರ್ಡ್‌ನ ವಿವಿಧ ಯೋಜನೆಗಳಲ್ಲಿ ತೊಡಗಿಸಲಾಗುವುದು ಕೃತಕ ಅಂಗಾಂಗಗಳ ಉತ್ಪಾದನೆ ವಿತರಣೆಗೆ, ರೋಗಿಗಳ ಉಚಿತ ಭೋಜನ ರಿಯಾಯಿತಿ ದರಗಳ ಪ್ರಯಾಣ ವೆಚ್ಚಗಳಿಗೆ ಬಳಸಲಾಗುವುದು ದಾನಗಳನ್ನು ಕಾರ್ಯನಿರ್ವಹಣಾಧಿಕಾರಿ, ಬರ್ಡ್ ಟ್ರಸ್ಟ್, ತಿ ತಿ ದೇವಸ್ಥಾನಗಳು, ತಿರುಪತಿ - ಇವರ ಹೆಸರಿಗೆ ಕಳುಹಿಸಬಹುದು



ಕಾರ್ಯನಿರ್ವಹಣಾಧಿಕಾರಿ,

ತಿ ತಿ ದೇವಸ್ಥಾನಗಳು, ತಿರುಪತಿ - 517 501